"ಇದರಲ್ಲಿ ಕರ್ನಾಟಕ ಸಾಹಿತ್ಯಕ್ಕೂ ಧರ್ಮಾಚಾರಗಳಿಗೂ ಸಂಬಂಧಪಟ್ಟ ಉತ್ತಮ ಪ್ರಬಂಧಗಳಿವೆ. ಈಗಿನ ಕಾಲಕ್ಕನುಸಾರವಾಗಿ ಸಭೆಗಳಲ್ಲಿ ಭಾಷಣ-ಉಪನ್ಯಾಸ ಮಾಡಲು ಅಭ್ಯಾಸ ಮಾಡಲಿಚ್ಛಿಸುವವರಿಗೆ ಈ ಹೊತ್ತಗೆಯು ವಿಷಯ ಸಂಗ್ರಹವನ್ನೊದಗಿಸುವ ಕೈಪಿಡಿಯಾಗಿರುತ್ತದೆ. ಭಾಷೆಯೂ ಶೈಲಿಯೂ ಅಕ್ಷರಜ್ಞರಾದ ಮಕ್ಕಳೂ ಸ್ತ್ರೀಯರೂ ಓದಿ ವಿಷಯ ಗ್ರಹಣ ಮಾಡಿಕೊಳ್ಳುವುದಕ್ಕೆ ತಕ್ಕುವಾಗಿವೆ. . . . ಇಂತಹ ಸಾಹಿತ್ಯವು ಸಮಾಜವನ್ನು ಎಚ್ಚರಗೊಳಿಸುವುದಕ್ಕೆ ಅತ್ಯಾವಶ್ಯಕವಾಗಿದೆ."

ಪಂಡಿತರತ್ನ
ಶ್ರೀ। ಎ. ಶಾಂತಿರಾಜ ಶಾಸ್ತ್ರಿಗಳು,
ಮೈಸೂರು.

ಒಂದು ರೂಪಾಯಿ

# ಮಹಾವೀರ ಜಯಂತಿ

## ಕುಮಾರರಿಗಾಗಿ

ಡಿ. ಪುಟ್ಟಸ್ವಾಮಿ, ಬಿ. ಎ., ಬಿ. ಎಲ್.

(ದ್ವಿತೀಯ ಮುದ್ರಣ)




ವಿವೇಕಾಭ್ಯುದಯ ಕಾರ್ಯಾಲಯ,
ವೀರಭವನ, ಮಂಗಳೂರು.

1952

# ಮುನ್ನುಡಿ

"ವಿವೇಕಾಭ್ಯುದಯ"ದಲ್ಲಿ ನಾನು ಆಗಿಂದಾಗ ಬರೆದ ಸಂಪಾದಕೀಯ ಲೇಖಗಳಲ್ಲಿ ಕೆಲವನ್ನೂ ಇತರ ಕೆಲವು ಲೇಖಗಳನ್ನೂ ಈ ಚಿಕ್ಕ ಸಂಗ್ರಹದಲ್ಲಿ ಪೋಣಿಸಿ ವಾಚಕರ ಮುಂದಿಡಲು ಬಯಸುತ್ತೇನೆ. ಈ ಪ್ರಬಂಧಗಳನ್ನು ಯಾವುದೊಂದು ಕ್ರಮವನ್ನನುಸರಿಸಿ ಬರೆದುದಲ್ಲ; ಸಂಗ್ರಹವು ಪೂರ್ಣವೂ ಅಲ್ಲ. ಈಗ ಪುಸ್ತಕರೂಪವಾಗಿ ಪ್ರಕಟಿಸುವಾಗ ಅಲ್ಲಲ್ಲಿ ಅಗತ್ಯವಿದ್ದ ಕೆಲವೇ ಮಾರ್ಪಾಟುಗಳನ್ನು ಮಾಡಿರುತ್ತೇನೆ.

ಈ ಪ್ರಬಂಧಗಳೆಲ್ಲ ನಮ್ಮ ಸಾಹಿತ್ಯದ ಮತ್ತು ಧರ್ಮಾಚಾರಗಳ ವಿಚಾರವಾಗಿ ಸಂಬಂಧಪಟ್ಟಿದ್ದು, ಇದರಲ್ಲಿ ವೈವಿಧ್ಯತೆಯಿರಲೆಂದೇ ಎರಡು ತಾತ್ತ್ವಿಕ ಲೇಖಗಳನ್ನೂ ಒಂದು ಚಿಕ್ಕ ಕಥೆಯನ್ನೂ ಈ ಸಂಗ್ರಹದಲ್ಲಿ ಪೋಣಿಸಿರುತ್ತೇನೆ.

ನಮ್ಮಲ್ಲಿ ಬೇಕಾದಷ್ಟು ಪುರಾಣಗಳು, ಪೂಜಾಸಾರಗಳು ಮತ್ತು ಸ್ತೋತ್ರಸಾರಗಳು ಇವೆ. ಆದರೆ, ಈ ರೀತಿಯ ವಿವೇಚನಾತ್ಮಕ ಗ್ರಂಥಗಳು ವಿರಳ; ಇಲ್ಲವೆನ್ನಲೂ ಬಹುದು. ಇಂತಹ ಸಾಹಿತ್ಯವು ಸಮಾಜವನ್ನು ಎಚ್ಚರಗೊಳಿಸಲು ತೀರ ಅಗತ್ಯವಾಗಿದೆ; ಸಮಾಜದ ದೃಷ್ಟಿಧ್ಯೇಯಗಳನ್ನು ನಿರ್ದೇಶಿಸಲು ಅನಿವಾರ್ಯವಾಗಿದೆ. ನಮ್ಮಲ್ಲಿ ಹೊಸ ಬೆಳಕು, ಹೊಸ ಸ್ಫೂರ್ತಿ, ಹೊಸ ಜೀವ ಬೆಳಗಬೇಕು. ಸಮಾಜವು ಚೇತರಿಸಿ ಕಾರ್ಯತತ್ಪರವಾಗಲಿಕ್ಕೆ ಸಹಾಯಕವಾದ ಸಾಹಿತ್ಯವು ಬೆಳೆಯಬೇಕು. ಅದಕ್ಕಾಗಿ ಈ ಪ್ರಯತ್ನವನ್ನು ಮಾಡಿರುತ್ತೇನೆ. ಈ ರೀತಿಯ ಸಾಹಿತ್ಯವು ಬೆಳೆಯಲೆಂದೇ ನನ್ನ ಆಶಯವಾಗಿದೆ.

ಈ ಲೇಖಗಳಲ್ಲಿ ದೋಷಗಳು ಕಾಣಬಹುದು; ಪುನರುಕ್ತಿಗಳು ತೋರಬಹುದು. ಆದರೆ ಈ ಎಲ್ಲ ಲೇಖಗಳು ಬೇರೆ ಬೇರೆ ಸಮಯಗಳಲ್ಲಿ ಬರೆದ ಕಾರಣ, ಅವುಗಳನ್ನು ದೋಷಗಳನ್ನಾಗಿ ವಾಚಕರು ಭಾವಿಸರೆಂದು ನಂಬಿರುತ್ತೇನೆ. ಈ ಕಿರಿ ಹೊತ್ತಿಗೆಗೆ ಸಾಕಷ್ಟು ಪ್ರೋತ್ಸಾ

ಶವು ಸಿಕ್ಕಿದರೆ ಇನ್ನೂ ಈ ರೀತಿಯ ಕೆಲವು ಗ್ರಂಥಗಳನ್ನು ಸಮಾಜದ ಮುಂದಿಡಲು ಬಯಸುವೆನು.

ಎರಡನೇ ಮುದ್ರಣದಲ್ಲಿ "ದಿಗಂಬರತ್ವ," "ಆಸ್ತಿಕವಾದ" ಮತ್ತು "ಜೈನಧರ್ಮದ ಐತಿಹಾಸಿಕ ಕಾಲ" ಎಂಬ ಮೂರು ಪ್ರಬಂಧಗಳನ್ನು ಸೇರಿಸಿರುತ್ತೇನೆ.

**ಡಿ. ಪುಟ್ಟಸ್ವಾಮಿ,** ಬಿ. ಎ., ಬಿ. ಎಲ್.

---

# ಸೂಚಿ

# ಮಹಾವೀರ ಜಯಂತಿ

ಭಗವಾನ್ ಮಹಾವೀರ ಸ್ವಾಮಿಯವರು ಇಪ್ಪತ್ತನಾಲ್ಕನೆ ತೀರ್ಥಂಕರ ಪರಮದೇವರೆಂಬುದು ಜನಜನಿತವಾದ ಮಾತು. ಇವರು **2686** ವರ್ಷಗಳ ಮೊದಲು, ಚೈತ್ರ ಶುಕ್ಲ ತ್ರಯೋದಶಿಯ ದಿವಸ ಕುಂಡಲಪುರದಲ್ಲಿ (ಪಾಟ್ನಾದ ಹತ್ತಿರವಿರುವ ಈಗಿನ ಕುಂಡ ಗ್ರಾಮ) ಉದಯಕ್ಕೆ ಬಂದರು. ಅಂದಿನಿಂದ ಆ ಪವಿತ್ರ ದಿನವು ಜೈನರ ಪೂಜ್ಯ ಸ್ಮರಣೀಯ ದಿನವಾಗಿದೆ. ಉತ್ತರ ಹಿಂದುಸ್ಥಾನದ ಶಿಕ್ಷಿತ ಜೈನ ಸಮಾಜದವರು ಪ್ರತಿಯೊಂದು ಕಡೆಯಲ್ಲೂ ಶ್ರೀ ವೀರ ಜಯಂತಿ ಉತ್ಸವವನ್ನೂ ಶ್ರೀ ನಿರ್ವಾಣ ಉತ್ಸವವನ್ನೂ ಬಹಳ ಭಕ್ತಿಯಿಂದಲೂ ವಿಜೃಂಭಣೆಯಿಂದಲೂ ಮಾಡುತ್ತಾರೆ. ಪ್ರತಿಯೊಂದು ಕಡೆಯಲ್ಲೂ ಪ್ರಾತಃಕಾಲ ಪ್ರಭಾತ ಫೇರಿಯ ಮೂಲಕ ಭಕ್ತಿಪ್ರದವಾದ ಧಾರ್ಮಿಕ ಭಜನೆಗಳನ್ನು ಹಾಡುತ್ತ ಜಿನಮಂದಿರಗಳಿಗೆ ಹೋಗಿ ಶ್ರೀ ಸ್ವಾಮಿಯನ್ನು ಭಕ್ತಿಯಿಂದ ಪೂಜಿಸುತ್ತಾರೆ. ಸಾಯಂಕಾಲ ಸಾರ್ವಜನಿಕ ಸಭೆ ಸೇರಿಸಿ ಅಲ್ಲಿ ಆಬಾಲವೃದ್ಧರಿಗೂ ತಿಳಿಯುವಂತೆ ಶ್ರೀ ಸ್ವಾಮಿಯ ಪರಮಪಾವನ ಜೀವನವನ್ನು ವಿವರಿಸುತ್ತಾ ಧರ್ಮದ ಅಪಾರ ಮಹಿಮೆಯನ್ನು ಕೊಂಡಾಡುತ್ತಾರೆ. ಹಾಗೆ ಧರ್ಮಪ್ರಭಾವನಾ ಕಾರ್ಯಗಳು ಆಗಾಗ ನಡೆಯುತ್ತಿರುವುದರಿಂದ ಪ್ರತಿಯೊಬ್ಬರಲ್ಲೂ ಸ್ವಧರ್ಮಾಭಿಮಾನವುಂಟಾಗಿ ಸನ್ಮಾರ್ಗದ ಕಡೆಗೆ ಅವರ ಬುದ್ಧಿಯು ತಿರುಗುವುದು.

ನಮ್ಮ ಕರ್ಣಾಟಕ ಜೈನಸಮಾಜದಲ್ಲಿ ಇತ್ತೀಚೆಗೆ ಕೆಲವು ಕಡೆ ಜಯಂತಿ ಉತ್ಸವವು ನಡೆಯುತ್ತಿದೆ. ಇಂಥಾ ಪರ್ವತಿಥಿಗಳನ್ನು ನಾವು ತಪ್ಪದೆ ಪ್ರತಿಯೊಬ್ಬರು ಆಚರಿಸಬೇಕು. ಹೀಗೆ ಅನಾದರಣೆಯಿಂದ ನಡೆಸದೆ ಇರುವಿಕೆಯಿಂದಲೇ ನಮ್ಮ ಸಮಾಜದಲ್ಲಿ ದಿನೇ ದಿನೇ ಧಾರ್ಮಿಕ ಜ್ಞಾನವು ಕಡಮೆಯಾಗುತ್ತಾ ನಮ್ಮ ಯುವಕರಲ್ಲಿ ಮತ್ತು ವಿದ್ಯಾರ್ಥಿಗಳಲ್ಲಿ ಧರ್ಮಾಭಿಮಾನವು ಕಡಮೆಯಾಗುತ್ತಿದೆ.

ಭಗವಂತನು ಉದಯಕ್ಕೆ ಬರುವ ಕಾಲದಲ್ಲಿ ಭಾರತವರ್ಷದ ಸ್ಥಿತಿಯು ಬಹಳ ಹೀನಾವಸ್ಥೆಯಲ್ಲಿತ್ತು. ಧರ್ಮದ ಹೆಸರಲ್ಲಿ ಹಿಂಸಾಮಯವಾದ ಪಾಪಕರ್ಮಗಳು ಯಥೇಚ್ಛವಾಗಿ ನಡೆಯುತಿದ್ದುವು. ಪರಸ್ಪರ ದ್ವೇಷ ಕಲಹದಿಂದಾಗಿ ಅಶಾಂತಿಯು ತುಂಬಿತ್ತು. ಆ ಭಯಂಕರವಾದ ಹಿಂಸಾಕರ್ಮವನ್ನು ಜಗತ್ತಿನಿಂದ ದೂರಪಡಿಸಲು ಒಂದು ಮಹಾಶಕ್ತಿಯ ಆವಶ್ಯಕತೆಯು ಆಗ ಬೇಕಾಗಿತ್ತು. ಆ ಸಂದರ್ಭದಲ್ಲೇ ಭಗವಾನ್ ಮಹಾವೀರ ಸ್ವಾಮಿಯು ಭಾರತಭೂಮಿಯಲ್ಲಿ ಉದಯಕ್ಕೆ ಬಂದರು.

ಪವಿತ್ರಧರ್ಮದ ಹೆಸರಲ್ಲಿ ನಡೆಯುತ್ತಿರುವ ಅತ್ಯಾಚಾರಗಳನ್ನು ನೋಡಿ ಮಹಾತ್ಮನಿಗೆ ಅದನ್ನು ಸಹಿಸಲಿಕ್ಕಾಗಲಿಲ್ಲ. ಅಪಾರ ವೈಭವದಿಂದ ಕೂಡಿದ ರಾಜವೈಭವಗಳನ್ನು ತೃಣದಂತೆ ತ್ಯಜಿಸಿ ಲೋಕೋದ್ಧಾರಕ್ಕಾಗಿ ಸೊಂಟಕಟ್ಟಿದರು. "ಅಹಿಂಸಾ ಪರಮೋ ಧರ್ಮ" ಪ್ರಾಣಿದಯೆಯು ಧರ್ಮದ ಮೂಲವೆಂಬ ತತ್ತ್ವವನ್ನು ಲೋಕಕ್ಕೆ ಸಾರಿದರು. ಆಗ ಸಂಪೂರ್ಣ ಪ್ರಪಂಚವೇ ಅವರ ಮುಂದೆ ಭಕ್ತಿಯಿಂದ ತಲೆಬಾಗಿ ನಿಂತಿತು. "ಭಗವಾನ್ ಮಹಾವೀರ ಸ್ವಾಮಿಕೀ ಜೈ", ಎಂಬ ದಿವ್ಯ ನಿನಾದವು ಸರ್ವತ್ರ ಹಬ್ಬಿತು.

ಅಂಥಾ ಮಹಾಮಹಿಮನಾದ ಭಗವಾನ್ ಮಹಾವೀರ ಸ್ವಾಮಿಯ ಜಯಂತಿಯು ಚೈತ್ರ ಶುಕ್ಲ ತ್ರಯೋದಶಿಯ ದಿವಸವಾದುದರಿಂದ ಆ ಪವಿತ್ರ ದಿವಸ ನಾವು ಪೂಜೆ ಗಾನಾದಿಗಳನ್ನು ಮಾಡಿ ನಮ್ಮ ಜೀವನವನ್ನು ಸಾರ್ಥಕಪಡಿಸಬೇಕು. ಮಹಾವೀರ ಸ್ವಾಮಿಯ ಮಾತುಗಳು ಅಂದಿನ ಭಾರತಕ್ಕೆ ಹೇಗೆ ಅನ್ವಯಿಸುತ್ತದೋ, ಅಂತೆಯೇ ಇಂದಿನ ಭಾರತಕ್ಕೂ ಪ್ರಪಂಚಕ್ಕೂ ಹೇಗೆ ಅನ್ವಯಿಸುತ್ತದೆಂದು ನೋಡಿಕೊಂಡು, ಆ ತತ್ತ್ವಗಳ ಪ್ರಚಾರವು ಹೇಗೆ ಇಂದಿನ ದಿವಸ ಅಗತ್ಯವಾಗಿರುವುದೆಂದು ಮನಗಾಣಬೇಕು. ಮಹಾವೀರ ಸ್ವಾಮಿಯ ಲೋಕೋತ್ತರವಾದ ತತ್ತ್ವಗಳನ್ನು ನಮ್ಮ ಜೀವನದಲ್ಲಿ ತುಂಬಿಸಿಕೊಂಡು, ಪ್ರಪಂಚದ ಜೀವನದಲ್ಲಿಯೂ ತುಂಬಿಸುವಂತೆ ಮಾಡುವುದು ಪ್ರತಿಯೊಬ್ಬನ ಕರ್ತವ್ಯವಾಗಬೇಕು. ಹಾಗೆ ತಿಳಿಯುವಂತಹ ಶಕ್ತಿಯನ್ನು ಈ ಜಯಂತಿಯ ದಿನದಲ್ಲಿ ಪ್ರತಿಯೊಬ್ಬನು ತನ್ನಲ್ಲಿರುವುದನ್ನಾಗಿ ಕಂಡುಕೊಳ್ಳುವಂತಾಗಬೇಕು. ಲೋಕವು ಅಭಿವೃದ್ಧಿಯಾಗಬೇಕು.

---

# ದೀಪಾವಳಿ

ಅಖಿಲ ಭಾರತೀಯರಿಗೂ ದೀಪಾವಳಿಯು ಒಂದು ಮಹತ್ತ್ವದ ಹಬ್ಬವು. ಜೈನರಿಗಂತು ಹಬ್ಬಗಳಲ್ಲಿ ಇದು ಅತ್ಯಂತ ಮಹತ್ತ್ವವುಳ್ಳದ್ದಾಗಿದೆ. ಇಪ್ಪತ್ತನಾಲ್ಕನೆಯ ತೀರ್ಥಂಕರರಾದ ಭಗವಾನ್ ಮಹಾವೀರ ಸ್ವಾಮಿಯು ಜನನ ಮರಣಗಳನ್ನು ಜಯಿಸಿ ಶಾಶ್ವತಸುಖಮಯವಾದ ಪರಮಾತ್ಮಸ್ವರೂಪವನ್ನು ಹೊಂದಿದ ಆ ಪವಿತ್ರವಾದ ದಿನವು ದೀಪಾವಳಿಯು. ಆ ದಿನವು ಜಗತ್ತಿನ ಅಜ್ಞಾನಾಂಧಕಾರವನ್ನು ನೀಗಲಿಕ್ಕೆ, ಮತ್ತು ದುಃಖವನ್ನು ಕಳೆಯಲಿಕ್ಕೆ ಬೇಕಾದ ಜ್ಞಾನದ ಬೆಳಕನ್ನು ನಮ್ಮ ಜೀವನದ ಹಣತೆಯಲ್ಲಿ ಉರಿಸಬೇಕೆಂದು ಸಂದೇಶ ಕೊಟ್ಟು ಲೋಕಕಲ್ಯಾಣದ ಉತ್ತರೋತ್ತರ ಅಭಿವೃದ್ಧಿಯನ್ನುಂಟುಮಾಡಿದ ಪರಮಪೂಜ್ಯರ ಮೋಕ್ಷ ಕಲ್ಯಾಣದ ಸುದಿನವು. ಅಂದಿನಿಂದ ಇಂದಿನ ತನಕ ದೀಪಾವಳಿಯಂದು ಹಣತೆಯಲ್ಲಿ ಎಣ್ಣೆಯ ಬತ್ತಿ ಉರಿಯುತ್ತಿದೆ, ಬೆಳಕೊಂದು ಕತ್ತಲೆಯಲ್ಲಿ ತೋರುತ್ತಿದೆ, ಕತ್ತಲೆಯನ್ನು ಬೆಳಗಿಸುತ್ತದೆ. ಆದರೆ, ಆದರೆ .......ಆ ದಿನದಲ್ಲಿ ನಮ್ಮ ಹೃದಯದಲ್ಲಿ ಧರ್ಮಜ್ಯೋತಿಯು ಬೆಳಗಿ ನಮ್ಮ ಅಜ್ಞಾನವನ್ನು ಹರಿದೋಡಿಸಿ, ಬೆಳಕಿನ ನಾಡಿಗೆ ನಮ್ಮನ್ನು ಕೊಂಡೊಯ್ಯಬೇಕಾಗಿದೆ.

ಸುಮಾರು ಇಪ್ಪತ್ತೈದು ಶತಮಾನಗಳ ಹಿಂದೆ, ಭಗವಾನ್ ಮಹಾವೀರಸ್ವಾಮಿಯು ಯಥಾರ್ಥವಾದ ಧರ್ಮವನ್ನು ಮೂವತ್ತು ವರ್ಷಗಳ ಕಾಲ ಬೋಧಿಸಿ ಲೋಕವನ್ನು ಉದ್ಧರಿಸಿದರು, ಅಸಂಖ್ಯಾತ ಪ್ರಾಣಿಗಳ ಅಜ್ಞಾನಾಂಧಕಾರವನ್ನು ದೂರಗೊಳಿಸಿದರು. ತಮ್ಮ ಜೀವನ್ಮುಕ್ತಾವಸ್ಥೆಯಲ್ಲಿ ಆಯುಷ್ಯವು ಒಂದು ತಿಂಗಳು ಉಳಿದಿದ್ದಾಗ ಸ್ವಾಮಿಯು ತಮಗುಂಟಾಗಿದ್ದ ವೈಭವಗಳನ್ನು ಬಿಟ್ಟು ಬಿಹಾರ್ ಪ್ರಾಂತ್ಯದ ಪಾವಾಪುರಿಯನ್ನು ಸೇರಿದರು. ಅಲ್ಲಿ, ಕಮಲಪುಷ್ಪಗಳ ಹಾಸದಿಂದ ಬೆಳಗಿ, ತಿಳಿಯಾದ ನೀರಿನ ಶಾಂತತೆಯಿಂದ ಕೂಡಿ ಮೆರೆಯುತ್ತಿದ್ದ ಕೆರೆಯ ಮಧ್ಯದಲ್ಲಿ ದೃಢತೆಯ ಮೂರ್ತಿಯಾಗಿ ಶಿಲೆಯೊಂದರಲ್ಲಿ ನಿಂತು ತಮ್ಮಲ್ಲಿ ಇನ್ನುಳಿದ ನಾಲ್ಕು ಅಘಾತಿಕರ್ಮಗಳನ್ನು ನಾಶ ಮಾಡಲು ಧ್ಯಾನಾರೂಢರಾದರು.

ಅವಸರ್ಪಿಣೀಕಾಲದ ನಾಲ್ಕನೆಯ ಭಾಗದಲ್ಲಿ ಮೂರು ವರ್ಷ ಎಂಟು ತಿಂಗಳು ಹದಿನೈದು ದಿವಸಗಳು ಉಳಿದಿರಲಾಗಿ ಭಗವಾನ್ ಮಹಾವೀರ ಸ್ವಾಮಿಯು ಆಶ್ವಯುಜ ಕೃಷ್ಣಪಕ್ಷ ಅಮಾವಾಸ್ಯೆಯ ಶುಭ ದಿವಸ ಮುಂಜಾನೆ ಸ್ವಾತಿ ನಕ್ಷತ್ರದಲ್ಲಿ ನಿರ್ವಾಣವನ್ನು ಹೊಂದಿ ಶಾಶ್ವತವೂ ಅಮರವೂ ಆದ ಮುಕ್ತಿಸುಖವನ್ನು ಪಡೆದರು.

ಭಗವಾನ್ ಮಹಾವೀರಸ್ವಾಮಿಯ ಅನುಯಾಯಿಗಳು ಪಾವಾಪುರಿಯಲ್ಲಿ ನೆರೆದು ಶ್ರೀ ಸ್ವಾಮಿಯ ನಿರ್ವಾಣಪೂಜೆಯನ್ನು ಅಂದು ಬಹು ವಿಜೃಂಭಣೆಯಿಂದ ನಡೆಸಿದರು. "ಆಹಾ! ನಮ್ಮಲ್ಲಿದ್ದ ಅಜ್ಞಾನದ ಕತ್ತಲೆಯನ್ನು ದೂರಮಾಡುವ ಜ್ಞಾನದ ಬೆಳಕು ಇಂದಿನ ದಿವಸ ನಮ್ಮ ನಡುವಿನಿಂದ ಮಾಯವಾಗುತ್ತಿದೆ; ನಂದಿಹೋಗುತ್ತಿದೆ. ನಂದಿಹೋಗುವ ಪ್ರಕಾಶದಿಂದ ಸಾವಿರ ಪ್ರಕಾಶಗಳನ್ನು ಬೇರೆ ಉರಿಸಿಕೊಳ್ಳುವ. ಜ್ಞಾನದಿಂದ ಜ್ಞಾನವು ಪ್ರಕಾಶಿಸುತ್ತದೆ. ದೀಪದಿಂದ ದೀಪವು ಉರಿಯುತ್ತಿದೆ. ಹಣತೆಯ ದೀಪಗಳನ್ನು ಉರಿಸಿ, ಈ ಪವಿತ್ರಜ್ಞಾನದ ಬೆಳಕಿನ ಸ್ಮರಣೆಯನ್ನು ನಮ್ಮ ಹೃದಯದಲ್ಲೇ ನೆಲೆಗೊಳಿಸುವ; ಈ ಜ್ಞಾನದ ಬೆಳಕು ಪರಂಪರೆಯಾಗಿ ಹರಡುವಂತೆ ಮಾಡಿಕೊಳ್ಳುವ" ಎಂಬುದಾಗಿ ಹೇಳಿ **ದೀಪಗಳ ಆವಳಿಯನ್ನು** ಹೊತ್ತಿಸಿ, ಕತ್ತಲೆಯ ದಿಕ್ತಟಗಳನ್ನು ಗುರುತಿಸಿಟ್ಟು, ಕತ್ತಲೆಯ ಭೀಕರತೆಯನ್ನು ಪುಡಿಗೈದು ಬೆಳಕಿನ ಉಷಾಕಾಂತಿ, ಸುಖ ಸಂತೋಷದ ಓಕುಳಿ, ಶುಕಪಿಕಾದಿ ಖಗಗಳ ಕಲಕಲ ಒಸಗೆ ಬರುವಂತೆ, ತೋರುವಂತೆ, ಹೊರಡುವಂತೆ ಪರ್ತಿಸಿ ಕೃತಾರ್ಥರಾದರವರು.

ಅಂದಿನಿಂದ ಜೈನರು ವರುಷದಿಂದ ವರುಷಕ್ಕೆ, ಹಣತೆಯಿಂದ ಹಣತೆಗೆ, ಒಂದು ಜೀವನದಿಂದ ಇನ್ನೊಂದು ಜೀವನಕ್ಕೆ, ಧರ್ಮಜ್ಯೋತಿಯನ್ನು ಹೊತ್ತಿಸುತ್ತಿದ್ದಾರೆ! ತಮ್ಮ ಜನ್ಮ ಸಾರ್ಥಕವಾಗಲೆಂದು ಇಚ್ಛಿಸುತ್ತಿದ್ದಾರೆ, ದೀಪಾವಳಿಯ ಮಹತ್ತ್ವವನ್ನು ಮನಗಾಣುತ್ತಿದ್ದಾರೆ.

ಮನೆಮನೆಯಲ್ಲಿ ದೀಪಾವಳಿಯ ಹಬ್ಬ ಬೆಳಗುತ್ತಿರಲಿ. ಪ್ರತಿಯೊಬ್ಬನ ಹೃದಯವೆಂಬ ಹಣತೆಯಲ್ಲಿ ಅಹಿಂಸೆಯೆಂಬ ತೈಲದಲ್ಲಿ ಜ್ಞಾನವರ್ತಿಯ ಜ್ಯೋತಿಯು ಬೆಳಗುತ್ತಿರಲಿ, ಆನಂದವು ಉಕ್ಕುತ್ತಿರಲಿ. ವಿವೇಕಾಭ್ಯುದಯವಾಗಿ ಶ್ರೀ ಮಹಾವೀರಸ್ವಾಮಿಯ ಸಂದೇಶವು ಸಾರಿ ಲೋಕಕಲ್ಯಾಣವಾಗುತ್ತಿರಲಿ.

# ನಿರ್ವಾಣದ ಪವಿತ್ರ ಉಷಾ

ಓ ಉಷೆಯೆ, ರಮಣೀಯಳೆ, ಪಾವನಳೆ, ಶಾಶ್ವತಳೆ!

ನಾಳಿನ ಪ್ರಾತಃಕಾಲದ ಮೊದಲು ನೀನು ಮೂಡುವಿಯೇ? ಎರಡು ಸಾವಿರದ ಆರನೂರ ಹದಿನಾಲ್ಕು ವರ್ಷಗಳ ಹಿಂದೆ ನೀಲಾಕಾಶದ ಮಿನುಗುವ ಸಾಸಿರ ತಾರೆಗಳ ಬದಿಯಿಂದ ಮೊಗಸೂಸಿ, ಕೆಳಗಡೆ ಹರಡಿದ್ದ ಪ್ರಶಾಂತ ಗಂಭೀರ ಪೃಥಿವಿಯ ಮೇಲೆ ಸತ್ಯಸೌಂದರ್ಯಗಳ ಚೆಲುವನ್ನು ನೀನು ಚೆಲ್ಲಿದಂತೆ ನಾಳೆಯೂ ನೀನು ಆಕಾಶದಲ್ಲಿ ಬೆಳಗಿ, ಪೃಥಿವಿಯನ್ನು ಪಾವನಗೊಳಿಸುವೆಯೇ? ಓ ಉಷೆಯೆ! ಓ ಉಷೆಯೆ!

ಈ ಸೃಷ್ಟಿ ನಿನ್ನೆಯಂತೆ ಇಂದಿಗೂ ಇದೆ. ಇಂದಿನಂತೆ ನಾಳೆಗೂ ಇದೆ. ಈ ನಕ್ಷತ್ರಗಳು, ಈ ಭೂಮಿ, ಈ ಕತ್ತಲು, ಈ ಹೊರಸೂಸುವ ಜ್ಞಾನದ ಕಿರಣವು ಇವೆಲ್ಲವೂ ಶಾಶ್ವತವು. ಉಷೆಯೆ, ಪ್ರತಿದಿನವೂ ನೀನು ನಿನ್ನ ಹೊಂಬಣ್ಣದ ಪಾವನವಾದ ಕೋಮಲತೆಯನ್ನೂ ಮಧುರತೆಯನ್ನೂ ಸೃಷ್ಟಿಯಲ್ಲೆಲ್ಲಾ ಚೆಲ್ಲಿ ಹೋಗುವೆಯೆ? ಈ ನಿನ್ನ ದಿವ್ಯ ಸಂದೇಶಕ್ಕೆ ಜನರೇಕೆ ಕಣ್ಮುಚ್ಚಿ ಕುಳಿತಿರುವರು? ಮಾನವ ಸಮಾಜವು ಇಂದಿಗೆ ಚಿಂದಿ ಚೂರಾಗುತ್ತಿದೆ! ಆದಿತೀರ್ಥಂಕರ ಋಷಭದೇವನ ಮಾತನ್ನು ಜಗತ್ತು ಮರೆತಿದೆ! ಗೋಪೀವಲ್ಲಭ ಶ್ರೀ ಕೃಷ್ಣನ ಕೊಳಲ ಗಾನದ ಇಂಪಿಗೆ ಜಗತ್ತು ಕಿವಿ ಮುಚ್ಚಿದೆ! ಬೋಧಿವೃಕ್ಷದ ಗೌತಮನ ತತ್ತ್ವವನ್ನು ಜನಗಳು ಮರೆತಿವೆ! ನಜರೆತ್ತಿನ ಯೇಸುಕ್ರಿಸ್ತನ ಸಂದೇಶವನ್ನು ರಾಷ್ಟ್ರಗಳು ಕೈಬಿಟ್ಟು ಕೊಟ್ಟಿವೆ. ಮಕ್ಕಾಪಟ್ಟಣದ ಪ್ರವಾದಿಯ ಉಪದೇಶವನ್ನು ಜನಗಳು ಮನ್ನಿಸದೆ ಹೋಗಿಬಿಟ್ಟಿವೆ! ಮಾನವನ ಜನ್ಮವು ದಿನದಿಂದ ದಿನಕ್ಕೆ ಹೇಯವಾಗುತ್ತ ಬಂದು, ಮಾನವ ಸಮಾಜದ ಭವಿಷ್ಯವು ಕೆಳಮೊಗವಾಗುತ್ತ ಬರುತ್ತಿದೆ.

ಓ ಉಷೆಯೇ! ಎರಡು ಸಾವಿರದ ಆರನೂರ ಹದಿನೆಂಟು ವರ್ಷಗಳ ಹಿಂದೆ, ನಿನ್ನ ಉದಯವಾಗುವ ಮುಂಚೆ ಪರಮಪಾವನವಾದ ಬೆಳಕೊಂದು

ಬೆಳಗಿ, ನಿನ್ನ ಕೋಮಲತೆಗೆ, ನಿನ್ನ ರಮಣೀಯತೆಗೆ, ನಿನ್ನ ಪಾವಿತ್ರ್ಯಕ್ಕೆ ಕಳೆಗೂಡಿಸಿತಲ್ಲವೆ? ಅಂದು ಪರಮಪಾವನವಾದ ಜ್ಯೋತಿಯು ಬೆಳಗಿತು. ತಂಪಾದ ಗಾಳಿ ಬೀಸಿತು. ಸರ್ವ ಋತುಗಳ ಪುಷ್ಪಸಂಕುಲವು ಬಿರಿದು ಸುಗಂಧವನ್ನು ಸೂಸಿತು. ದೇವತೆಗಳು ವಿಮಾನಗಳಲ್ಲಿ ಕುಳಿತು ಆಯ್ದು ತಂದ ಹೂಗಳ ಸುರಿಮಳೆಯನ್ನು ಸುರಿಸಿದರು! ಸಿಂಹದ ಮರಿಯು ಹುಲಿಯ ಮರಿಯೊಡನೆ ನಲಿದಾಡಿತು. ಭಾರತವರ್ಷದ ಧರ್ಮಾತ್ಮವಾದ ಕ್ಷೇತ್ರ ದಿಂದ ರುಧಿರದ ನದಿಗಳು ಬತ್ತಿ ಹೋದುವು; ಆ ನದಿಗಳಲ್ಲಿ ಮತ್ತೆ ಹಿಮಾ ಲಯನ ಕರುಣಾಹಿಮವು ಕರಗಿ ಬಂದು ನೀರಾಗಿ, ಜೀವನವಾಗಿ, ಪರಮ ಪುಣ್ಯವಾಗಿ ಹರಿದು ಸಾರಿತು! ಮಾನವನಿಗೆ ವೇದಗಳ ಸಾರವು ಅಹಿಂಸೆ ಯೆಂದು ಮಹಾವೀರರು ಸಾರಿದರು. ಅಹಿಂಸೆಯ ತತ್ತ್ವವನ್ನು ಪ್ರಚಾರ ಮಾಡಿ ಅಂದಿನ ದಿವಸ ಆಶ್ವಯುಜ ಕೃಷ್ಣ ಅಮಾವಾಸ್ಯೆಯ ದಿವಸ ಪರಮ ನಿರ್ವಾಣವನ್ನು ಹೊಂದಿದರು. ಓ ಉಷೆಯೆ! ಆ ಕಾಲದಲ್ಲಿ ಭಗವಂತನಾದ ಮಹಾವೀರರು ನಿರ್ವಾಣಹೊಂದುವಾಗ ತಮ್ಮ ಅಮೃತ ವಾಣಿಯಿಂದ ಜನತೆಯ ಅಂಧಕಾರವನ್ನೂ ಮೂಢವಿಶ್ವಾಸಗಳನ್ನೂ ಹೋಗ ಲಾಡಿಸಿ, ಶಾಶ್ವತವಾದ ಮೋಕ್ಷಸುಖದ ದಾರಿಯನ್ನು ಅವರು ಕಾಣಿಸಿದ ರಲ್ಲವೇ?

ಓ ಉಷೆಯೆ! ಆ ರಾತ್ರಿ, ನೀನು ಮೆಲ್ಲಮೆಲ್ಲನೆ ಆಕಾಶಪಥದಲ್ಲಿ ಹಜ್ಜೆಯಿಟ್ಟು ಬಂದಾಗ ಕಂಡ ಈ ಪವಿತ್ರವಾದ ದೃಶ್ಯವನ್ನು ಮರೆಯ ಲಾಗುವುದೆ? ಗಣಧರ ಗೌತಮನು ಭಗವಂತನ ಅಮೃತವಾಣಿಯನ್ನು ಗ್ರಹಿಸಿ ಲೋಕಕಲ್ಯಾಣಕ್ಕೆ ಅಣಿ ಮಾಡುತಿದ್ದಾಗ, ಓ ಉಷೆಯೇ! ಆ ದೃಶ್ಯವು ಎಷ್ಟು ಸುಂದರವಾಗಿತ್ತು? ದೇವತೆಗಳೂ ಮನುಷ್ಯರೂ ಪಶು ಗಳೂ ಮ್ಲೇಚ್ಛರೂ ತಮ್ಮ ದ್ವೇಷಾಸೂಯೆಗಳನ್ನು ಬಿಟ್ಟು ಪರಸ್ಪರ ಸೌಹಾ ರ್ದದಿಂದ ನಡೆಯುತ್ತಿದ್ದರು. ಎಲ್ಲೆಲ್ಲೂ ಅಖಂಡವಾದ ಶಾಂತಿಯು ಹರಡಿತ್ತು. ದೇವತೆಗಳು ದೇವನಿರ್ಮಿತ ದೀಪಗಳನ್ನು ಬೆಳಗಿಸಿದರು. ಮನುಷ್ಯರು ಹಣತೆಗಳ ದೀಪಗಳನ್ನು ಹೊತ್ತಿಸಿ ಜ್ಞಾನಾನಂದದ ಸಂತೋಷ ದಲ್ಲಿ ಮೈಮರೆತರು, ಮಹಾವೀರನ ನಿರ್ವಾಣದ ದೀಪಾವಳಿಯು ಬೆಳ ಗಿತು!

ಓ ಉಷೆಯೆ, ರಮಣೀಯಳೆ, ಪಾವನಳೆ, ಶಾತ್ವತಳೆ!

ಹಳೆಯ ವರ್ಷವು ನಿನ್ನೆಯ ನೂರ್ರ್ಕೋಟಿಗೆ ಸೇರುತಿದೆ. ಹೊಸ ವರ್ಷವು ನಿನ್ನಯ ಹೊಂಬಣ್ಣದ ನಡುವಿಂದ ಇಣಿಕುತಿದೆ! ನಿನ್ನಯ ಕೋಮಲತೆ, ನಿನ್ನಯ ಮಾಧುರ್ಯ, ನಿನ್ನಯ ಮಾರ್ದವ—ಇವುಗಳ ಸವಿ, ಇವುಗಳ ಸಂದೇಶ, ಹೊಸ ವರ್ಷದ ಸೂರ್ಯೋದಯದೊಡನೆ ನಮಗೆ ಪ್ರಾಪ್ತವಾಗಲಿ! ಶಾಂತಿಯ ಸಂದೇಶ, ಅಹಿಂಸೆಯ ಸಂದೇಶವು ಜಗತ್ತಿನ ಮೂಲೆಗಳಿಗೆ ಪ್ರಾಪ್ತವಾಗಲಿ!

---

# ಇಂದು ನಮ್ಮ ಕರ್ತವ್ಯವೇನು?

ಗೌರವಪೂರ್ಣವಾದ ಪ್ರಾಚೀನ ಇತಿಹಾಸದ ಜ್ಞಾನವು ಒಂದು ಸಮಾಜಕ್ಕೂ ಒಂದು ದೇಶಕ್ಕೂ ಉತ್ತರೋತ್ತರ ಅಭಿವೃದ್ಧಿಯನ್ನು ಸಾಧಿಸುವುದಕ್ಕೆ ಬಹಳ ಸಾಧಕವಾಗುತ್ತದೆ. ಆದುದರಿಂದ ತಮ್ಮ ತಮ್ಮ ಸಮಾಜದ ಅಥವಾ ದೇಶದ ಪ್ರಾಚೀನ ಇತಿಹಾಸವನ್ನು ಮನನ ಮಾಡಿಕೊಂಡು—ಯಾವ ಯಾವ ಕಾರಣದಿಂದ ಹಿಂದಿನವರು ಕೃತಕೃತ್ಯರಾದರು, ಹಿಂದಿನವರ ಯಾವ ಅನುಭವವು ನಮ್ಮ ಅಭಿವೃದ್ಧಿಗೆ ಪ್ರಯೋಜನವನ್ನು ತರಬಹುದು, ಎಂಬುದನ್ನು ಪ್ರತಿಯೊಬ್ಬರು ತಮ್ಮ ಜೀವಮಾನದಲ್ಲಿ ಒಂದು ಸಲವಾದರೂ ಪರ್ಯಾಲೋಚಿಸುವುದು ಅತ್ಯಾವಶ್ಯಕವಾಗಿದೆ. ಈ ದೃಷ್ಟಿಯಿಂದಲೇ ನಮ್ಮ ಜೈನ ಸಮಾಜದ ಪ್ರಾಚೀನ ಇತಿಹಾಸದ ಕಡೆಗೆ ನಮ್ಮ ದೃಷ್ಟಿಯನ್ನು ನಾವು ಪದೇ ಪದೇ ಬೀರಬೇಕು. ನಮ್ಮ ಜೈನ ಧರ್ಮದ ಪ್ರಾಚೀನ ಇತಿಹಾಸವು ಜೈನ ಸಾಮಾನ್ಯಕ್ಕೆ ಸರಿಯಾಗಿ ತಿಳಿಯದೆ ಇದ್ದ ಕಾರಣವೇ, ಜೈನ ಧರ್ಮದ ವಿಷಯವಾಗಿ ಅನೇಕ ಭ್ರಮಪೂರ್ಣವಾದ ಕಲ್ಪನೆಗಳು ಹುಟ್ಟಲು ಕಾರಣವಾಯಿತು. ಹೀಗಾಗಿ ನಮ್ಮವರಿಗೆ ಪ್ರಾಚೀನ ಇತಿಹಾಸದ ಸ್ಪಷ್ಟವಾದ ರೇಖೆಯೂ ಪ್ರಕಾಶವಾಗದೆ, ಧರ್ಮದ ವಿಚಾರವಾಗಿ ಅಧುನಿಕ ಸ್ಥಿತಿಗತಿಯು ಸರಿಯಾದ ರೂಪವೂ ತೋರಿ ಬಾರದೆ, ಧರ್ಮವೂ ಧರ್ಮಿಗಳೂ ಒಂದು ತರದ ಪೃಥಕ್ ಭಾವವನ್ನು ಹೊಂದಿ, ತಮ್ಮ ಸ್ಥಾನ ಗೌರವವನ್ನು ಕಳೆದುಕೊಳ್ಳಬೇಕಾಯಿತು. ಮಿಥ್ಯಾ ಅಭಿಪ್ರಾಯಗಳು ಪ್ರಸಾರವಾಗಲು ಸ್ಥಿತಿಗತಿಗಳನ್ನು ಒದಗಿಸಿಕೊಟ್ಟಂತಾಯಿತು.

ಆದರೆ ಈ ತರಹದ ಅಜ್ಞಾನದ ಮರೆಯನ್ನು ಜೈನ ಧರ್ಮದ ಪವಿತ್ರವಾದ ಸ್ವರೂಪದ ಮೇಲಿಂದ ತೆಗೆಯಲಿಕ್ಕೆ ಪಾಶ್ಚಾತ್ಯ ವಿದ್ವಾಂಸರು ಬಂದು ಕೆಲಸ ಮಾಡಿಕೊಡಬೇಕಾಯಿತು. ಆ ಪಾಶ್ಚಾತ್ಯ ವಿದ್ವಾಂಸರು ಜೈನ ಧರ್ಮದ ಅಭ್ಯಾಸ ಮಾಡಿ, ಅದಕ್ಕಿರುವ ಗೌರವಪೂರ್ಣ

ವಾದ ಸ್ಥಾನವನ್ನು ಒಪ್ಪಿದುದರಿಂದ ತಾನೆ, ಜೈನ ಧರ್ಮದ ವಿಚಾರ ದಲ್ಲಿದ್ದ ತಪ್ಪು ಅಭಿಪ್ರಾಯಗಳು ಮಾಯವಾಗುತ್ತ ಬಂದಿವೆ. ಆದರೆ ಇಂದಿಗೂ "ಜೈನ ಧರ್ಮವು ಹಿಂದುಧರ್ಮದ ಶಾಖೆಯು; ಬೌದ್ಧಧರ್ಮದ ಶಾಖೆಯು; ಭಗವಾನ್ ಮಹಾವೀರ ಸ್ವಾಮಿಯವರಿಂದ ಸ್ಥಾಪಿತವಾದ ಮತವು" ಎಂದು ಭ್ರಮಪೂರ್ಣವಾದ ಅಭಿಪ್ರಾಯವು ಇನ್ನೂ ಕೆಲವ ರಲ್ಲಿ ನೆಲೆಗೊಂಡಿದೆ.

ಶ್ರೀ ಜಗಮಂದಿರ್‌ಲಾಲ್ ಜೈನ್ ಇವರು ತಮ್ಮ "Outlines of Jainism" ಎಂಬ ಪುಸ್ತಕದಲ್ಲಿ "The Jainas of India were ignorant of the western methods of study. Worse than this, thay were religiously averse to letting non-Jainas read or even see or touch their sacred books. In consequence Jainism was mis-understood and misrepresented.........But by the labours of men like Weber, Buller, Jacobi and others the credibility of its tradition has been established and it has been accorded the recognition due to its antiquity and importance.—ಜೈನರಿಗೆ ಪಾಶ್ಚಾತ್ಯರ ಅಭ್ಯಾಸ ಕ್ರಮವು ತಿಳಿದಿಲ್ಲ; ಜೈನರು ಧರ್ಮದೃಷ್ಟಿಯಿಂದ ತಮ್ಮ ತತ್ತ್ವಗಳು ಅಜೈನರಾದವರಿಗೆ ತಿಳಿಯಬಾರದೆಂದೂ, ಅಜೈನರು ಜೈನ ಗ್ರಂಥಗಳನ್ನು ಮುಟ್ಟಬಾರದೆಂದೂ ಓದಬಾರದೆಂದೂ ನೋಡಬಾರದೆಂದೂ ಆಗ್ರಹಪಡು ತ್ತಿದ್ದರು. ಇದರ ಫಲವಾಗಿ ಜೈನಧರ್ಮವು ಜೈನೇತರರಿಗೆ ತಿಳಿಯದೆ ಹೋಯಿತು; ಅದರಿಂದ ತಪ್ಪು ಅಭಿಪ್ರಾಯಗಳೂ ಉಂಟಾದುವು."

ಈ ರೀತಿಯ ಅಜ್ಞಾನಕ್ಕೆ ನಾವು ಜೈನರೇ ಮುಖ್ಯ ಹೊಣೆಗಾರರು. ಇಂದಿನ ತನಕವೂ ನಮ್ಮ ಸಾಹಿತ್ಯವನ್ನು ಅಡಗಿಸಿದೆವು; ಪವಿತ್ರವಾದ ಜ್ಞಾನವನ್ನು ಇತರರಿಗೆ ನಿರಾಕರಿಸಿದೆವು. ನಮ್ಮ ಗ್ರಂಥಗಳು ಅಚ್ಚಾಗ ಬಾರದೆಂದು ಈಗಲೂ ಹೇಳುವ ಮಂದಿ ಎಷ್ಟು ಇರುವುದಿಲ್ಲ? ಆದರೆ, ಅಚ್ಚಾದ ಗ್ರಂಥಗಳಿಂದ ನಮ್ಮ ಸಮಾಜಕ್ಕೆ ಯಾವ ಗೌರವ ಬಂತೆಂದು

ಪ್ರತಿಯೊಬ್ಬನಿಗೂ ತಿಳಿದಿದೆ. ಕನ್ನಡ ಸಾಹಿತ್ಯಕ್ಕೆ ನಮ್ಮ ಸಮಾಜವು ಪಂಪನನ್ನು ಕೊಟ್ಟಿತು; ರನ್ನನನ್ನು ಕೊಟ್ಟಿತು; ರತ್ನಾಕರನನ್ನು ಕೊಟ್ಟಿತು; ಕೇಶಿರಾಜನನ್ನು ಕೊಟ್ಟಿತು. ಜೈನ ಸಾಹಿತ್ಯದ ತಳಹದಿಯಲ್ಲಿ ಕನ್ನಡದ ಸಾಹಿತ್ಯ ಮಂದಿರವು ಕಟ್ಟಲ್ಪಟ್ಟಿತು. ಈ ಜೈನ ಧರ್ಮದ ಮಹಾ ಪ್ರವರ್ತಕರಿಂದ ಜೈನ ಧರ್ಮದ ಪ್ರಕಾಶವಾಗಿ ಎಷ್ಟು ಮಂದಿ ಕನ್ನಡಿಗರ ಆತ್ಮವು ಸಂಸ್ಕಾರವಾಗುವುದಿಲ್ಲ? ಎಷ್ಟು ಮಂದಿ ಕನ್ನಡದ ಯುವಕರು ಪಂಪರನ್ನಾದಿಗಳ ವರ್ಚಸ್ಸಿನಿಂದ ಬಳೆಯುತ್ತಿರುವುದಿಲ್ಲ? ಪಂಪರನ್ನಾದಿಗಳ ಸಾಹಿತ್ಯವು ಅಚ್ಚಿನ ಮೊಳೆಗೆ ಬಾರದೆ ಇದ್ದಿದ್ದರೆ, ಕನ್ನಡ ದೇಶ, ಕನ್ನಡ ಭಾಷೆ, ಕನ್ನಡಿಗರು ಎಷ್ಟೊಂದು ಸಂಪತ್ತನ್ನು ಕಳೆದುಕೊಳ್ಳುವಂತಾಗುತ್ತಿತ್ತು! ನಮ್ಮವರ ಜೀವನವು ಎಷ್ಟೊಂದು ಶೂನ್ಯವಾಗುತ್ತಿತ್ತು? ಜೈನಸಾಹಿತ್ಯವೆಲ್ಲ, ಜೈನ ತತ್ತ್ವವೆಲ್ಲ, ಎಲ್ಲರ ಬದುಕು ಆಗಬೇಕು; ಎಲ್ಲರ ಬದುಕನ್ನು ಸಂಸ್ಕರಿಸಬೇಕು. ಜೈನ ಬಾಂಧವರು ದೇಶದ ಸಂಪತ್ತಿಗೆ ಕೈಗೊಟ್ಟಂತೆ, ದೇಶದ ಜ್ಞಾನಸಂಪತ್ತಿಯನ್ನೂ ಅಭಿವೃದ್ಧಿಗೊಳಿಸಬೇಕು.

ಜೈನ ಧರ್ಮದ ಪ್ರಭಾವನೆಗೆ, ಜೈನ ಧರ್ಮದ ಇತಿಹಾಸ ಮತ್ತು ಗೌರವ ಸ್ಥಾನಮಾನದ ಸಂಪಾದನೆಗೆ ಮುಖ್ಯವಾಗಿ ಎರಡು ಸಾಧನಗಳಿವೆ. ಮೊದಲನೆಯದಾಗಿ ಜೈನ ಪ್ರತಿಮೆಗಳ ಮತ್ತು ಶಿಲಾಲೇಖಗಳ ಸಂಗ್ರಹ ಮಾಡುವುದು. ಎರಡನೆಯದಾಗಿ ಜೈನ ಸಾಹಿತ್ಯವನ್ನು ವಿವಿಧ ಭಾಷೆಗಳಲ್ಲಿ ಪ್ರಕಟಿಸುವುದು. ಇವೆರಡನ್ನು ನಾವು ಮಾಡಿದಲ್ಲಿ ನಿಜವಾಗಿಯೂ ನಮ್ಮ ಸಮಾಜಕ್ಕೆ ನಾವು ಸೇವೆ ಮಾಡಿದಂತಾಗುತ್ತದೆ.

ಪ್ರತಿಮಾಲೇಖ ಮತ್ತು ಶಿಲಾಲೇಖ—ಈ ಕಾರ್ಯವು ಮಹತ್ತ್ವಪೂರ್ಣವೂ ಕಷ್ಟಸಾಧ್ಯವೂ ಆಗಿದೆ. ಆದರೆ ಪರಿಶ್ರಮಪೂರ್ವಕವಾಗಿ ಮಾಡಿದರೆ, ಇದರಿಂದ ಎಷ್ಟೋ ಪ್ರಯೋಜನವಿದೆ. ಅಲ್ಲಲ್ಲಿಯ ಜಿನ ಮಂದಿರಗಳಲ್ಲಿರುವ ಶಿಲಾಲೇಖಗಳ ಮತ್ತು ಯಂತ್ರಾದಿಗಳ ಪ್ರತಿಗಳನ್ನು ತೆಗೆದು ಆಯಾ ಮಂದಿರಗಳ ಇತಿಹಾಸವನ್ನು ಬರೆದು, ಯಾವ ವಿಶಿಷ್ಟವಾದ ಧ್ಯೇಯಕ್ಕೆಂದು, ಯಾವ ವಿಶಿಷ್ಟವಾದ ತತ್ತ್ವಕ್ಕೆಂದು ಆ

ಮಂದಿರಗಳು ಸ್ಥಾಪಿಸಲ್ಪಟ್ಟಿವೆಯೋ, ಆ ಧ್ಯೇಯದ ಪ್ರಚಾರಕ್ಕಾಗಿ, ಆ ತತ್ತ್ವದ ಸಾಧನೆಗಾಗಿ ಆ ಮಂದಿರಗಳನ್ನು ನಡೆಸಿಕೊಂಡು ಬಂದು, ಈಗಿನ ಜೀವನವು ಹಿಂದಿನ ಜೀವನದೊಡನೆ ಹಾಸುಹೊಕ್ಕಾಗಿಯೂ ಸಂಘಟಿತ ವಾಗಿಯೂ ಇರುವಂತೆ ನೋಡುವುದು ನಮ್ಮೆಲ್ಲರ ಕರ್ತವ್ಯವಾಗಿದೆ. ಇದರಿಂದ ಪ್ರಾಚೀನ ಜೈನ ಧರ್ಮದ ಇತಿಹಾಸವು ಜನಸಾಮಾನ್ಯಕ್ಕೆ ಪ್ರಕಟಿಸಿದಂತಾಗಿ ಆ ಇತಿಹಾಸದ ಹುರುಪು ಸಿಕ್ಕುವಂತಾಗಬಹುದು. ಇತ್ತೀಚೆಗೆ ನಡೆದ ಭೂಗರ್ಭಶೋಧನೆಯಲ್ಲಿ ಎಷ್ಟು ಜಿನಪ್ರತಿಮೆಗಳು ಸಿಕ್ಕಿ ನಮ್ಮ ಜೈನ ಧರ್ಮವು ಸಾವಿರಾರು ವರ್ಷಗಳಿಂದ ಮೆರೆಯುತ್ತಿತ್ತೆಂಬುದು ತಿಳಿದುಬರುವುದಿಲ್ಲ?

ಎರಡನೆಯದಾಗಿ ಜೈನ ಸಾಹಿತ್ಯ ಪ್ರಕಾಶನ—ಈ ಕಾರ್ಯವು ಕೂಡ ಅತಿ ಮುಖ್ಯವಾದುದು. ಪಾಶ್ಚಾತ್ಯರ ಸಂಶೋಧನಾಕಾರ್ಯದಿಂದ ನಮ್ಮ ಧರ್ಮದ ಮೇಲಿದ್ದ ಮಿಥ್ಯಾ ಭಾವನೆಗಳು ಹೇಗೆ ಮಾಯವಾಗುತ್ತ ಬಂದುವೆಂಬುದು ವಿದಿತವಾದ ವಿಷಯವಷ್ಟೆ? ಈಗ ನಮ್ಮ ಅಪಾರ ಸಾಹಿತ್ಯವನ್ನು ನಮ್ಮ ವಿದ್ವಾಂಸರೂ ಶ್ರೀಮಂತರೂ ಸೇರಿ ಪ್ರಕಟಪಡಿಸುವಂತಾಗಿದೆ. ಅದರಲ್ಲೂ ಆ ಮೂಲೆಯಪಾಲಾದ ಗ್ರಂಥಗಳನ್ನು ಮೊದಲಾಗಿ ಉದ್ಧರಿಸಿ, ಅವುಗಳ ಪ್ರಚಾರವನ್ನು ಸಾಧಿಸತಕ್ಕದ್ದು. ಈ ರೀತಿ ಪ್ರಭಾವನಾಕಾರ್ಯವನ್ನು ಮಾಡಿ, ಪವಿತ್ರವಾದ ಜೈನಧರ್ಮವು ಅನಾದಿಯೆಂಬ ವಿಚಾರವನ್ನೂ ಅದೊಂದು ಸ್ವತಂತ್ರ ವಿಶ್ವಧರ್ಮವೆಂಬುದನ್ನೂ ಸಾರುವ ಭಾರವು ನಮ್ಮದಾಗಿದೆ.

---

# ಭಕ್ತಿಯೋಗ

ಜೈನ ಧರ್ಮದ ಅನುಸಾರ ಸರ್ವ ಜೀವಿಗಳು ದ್ರವ್ಯ ದೃಷ್ಟಿಯಿಂದ ಅಥವಾ ಶುದ್ಧ ನಿಶ್ಚಯನಯದ ಅಪೇಕ್ಷೆಯಿಂದ ಪರಸ್ಪರ ಸಮಾನವಾಗಿವೆ. ಅವುಗಳಲ್ಲಿ ಯಾವ ಭೇದಗಳೂ ಇಲ್ಲ. ಎಲ್ಲಾ ಜೀವಿಗಳ ವಾಸ್ತವಿಕ ಗುಣಸ್ವಭಾವಗಳು ಒಂದೇ ಆಗಿರುತ್ತವೆ. ಪ್ರತಿಯೊಂದು ಜೀವಿಯು ಸ್ವಭಾವದಿಂದಲೇ ಅನಂತದರ್ಶನ, ಅನಂತಜ್ಞಾನ, ಅನಂತಸುಖ ಮತ್ತು ಅನಂತ ವೀರ್ಯಾದಿ ಅನಂತ ಶಕ್ತಿಗಳ ಆಧಾರವಾಗಿದೆ; ಅವುಗಳ ಪಿಂಡ ವಾಗಿದೆ. ಆದರೆ ಅನಾದಿಕಾಲದಿಂದ ಜೀವದೊಡನೆ ಕರ್ಮಮಲವು ಬೆರೆತಿದ್ದು ಜೀವಿಯ ನಿಜವಾದ ಸ್ವಭಾವವು ಅಡಗಿ ಹೋಗಿರುತ್ತದೆ. ಕರ್ಮಮಲಗಳಲ್ಲಿ ಜ್ಞಾನಾವರಣಾದಿ ಮೂಲ ಪ್ರಕೃತಿಗಳು 8, ಉತ್ತರ ಪ್ರಕೃತಿಗಳು **148**, ಮತ್ತು ಉತ್ತರೋತ್ತರ ಪ್ರಕೃತಿಗಳು ಅಸಂಖ್ಯಾತ ವಾಗಿವೆ.

ಈ ಕರ್ಮಸಂಯೋಗದಿಂದ ಜೀವಿಗಳು ಪರತಂತ್ರಗಳಾಗಿ ನಾನಾ ಪರ್ಯಾಯಗಳನ್ನು ಧಾರಣೆ ಮಾಡುತ್ತವೆ. ಲೋಕದಲ್ಲಿ ಎಷ್ಟು ತರಹದ ಪ್ರಾಣಿಗಳಿರುತ್ತವೆಯೋ ಅಷ್ಟು ತರಹದ ಅವಸ್ಥೆಗಳನ್ನು ಈ ಜೀವಿಗಳು ಕರ್ಮದಿಂದಾಗಿ ಹೊಂದುತ್ತವೆ. ಈ ಭೇದದಿಂದಾಗಿಯೇ ಜೀವ-ಜಗತ್ತು ಭೇದರೂಪವಾಗಿ ಕಾಣುತ್ತದೆ. ಜೀವನ ಈ ರೀತಿಯ ಅವಸ್ಥೆಗೆ "ವಿಭಾವ ಪರಿಣತಿ" ಎಂಬುದಾಗಿ ಹೇಳುತ್ತಾರೆ.

ಎಂದಿನ ತನಕ ಈ "ವಿಭಾವ ಪರಿಣತಿ"ಯು ಜೀವನಿಗಿರುತ್ತದೋ ಅಂದಿನ ತನಕ ಅವನು "ಸಂಸಾರಿ" ಎನಿಸಲ್ಪಡುತ್ತಾನೆ. ಕರ್ಮಾನು ಸಾರ ಜೀವನು ನಾನಾ ರೂಪಗಳನ್ನು ಧಾರಣೆ ಮಾಡುತ್ತ ಸಂಸಾರ ದಲ್ಲಿ ತಿರುಗುತ್ತಾನೆ. ದುಃಖ ಪಡುತ್ತಾನೆ. ಆ ಜೀವನೇ ಯೋಗ್ಯ ಸಾಧನಗಳ ಬಲದಿಂದ "ವಿಭಾವ ಪರಿಣತಿ"ಯನ್ನು ನಾಶ ಮಾಡುತ್ತಾನೆ. ಆಗ ಜೀವ ಅಥವಾ ಆತ್ಮನಲ್ಲಿ ಕರ್ಮಮಲದ ಸಂಬಂಧವಿರುವುದಿಲ್ಲ. ಜೀವನ ನಿಜ ಸ್ವಭಾವವು ಅಂದು ಸರ್ವಾಂಗರೂಪದಿಂದ, ಪೂರ್ಣತೆ

ಯಿಂದ ವಿಕಸಿತವಾಗುತ್ತದೆ. ಸಂಸಾರ ಪರಿಭ್ರಮಣೆಯಿಂದ ವಿಮುಕ್ತನಾಗಿ ಮುಕ್ತಿಯನ್ನು ಹೊಂದುತ್ತಾನೆ. ಆ ಅವಸ್ಥೆಯಲ್ಲಿರುವ ಜೀವಿಯನ್ನು"ಮುಕ್ತ" "ಸಿದ್ಧ" ಅಥವಾ "ಪರಮಾತ್ಮ"ನೆಂದು ಕರೆಯುತ್ತಾರೆ.

ಪರಮಾತ್ಮರಲ್ಲಿ "ಜೀವನ್ಮುಕ್ತ" ಮತ್ತು "ವಿದೇಹಮುಕ್ತ"ವೆಂಬುದಾಗಿ ಎರಡು ಅವಸ್ಥೆಗಳಿವೆ. ಪರ್ಯಾಯ ದೃಷ್ಟಿಯಿಂದ ಜೀವಿಗಳಲ್ಲಿ "ಸಂಸಾರಿ" ಮತ್ತು "ಸಿದ್ಧ"ರೆಂಬುದಾಗಿ ಎರಡು ಭೇದಗಳು. ಅವಿಕಸಿತ, ಅಲ್ಪವಿಕಸಿತ, ಬಹುವಿಕಸಿತ, ಮತ್ತು ಪೂರ್ಣವಿಕಸಿತವೆಂಬುದಾಗಿ ನಾಲ್ಕು ಭೇದಗಳಾಗಿಯೂ ಜೀವಿಗಳನ್ನು ವಿಂಗಡಿಸಬಹುದು. ಅಧಿಕಾಧಿಕ ವಿಕಸಿತವಾದ ಜೀವಿಯೇ ಪೂಜ್ಯ ಪೂಜನೀಯವಾಗಿದೆ.

ಸಂಸಾರಿ ಜೀವಿಗಳಿಗೆ ತಮ್ಮ "ವಿಭಾವ ಪರಿಣತಿ"ಯನ್ನು ಬಿಡುವುದರಿಂದಲೇ ಸ್ಥಿರವಾಗಿರುವ ಸ್ವಾಭಾವಿಕ ಸಿದ್ಧಿಯು ಪ್ರಾಪ್ತವಾಗುವುದು. ಇದಕ್ಕೆ ಆತ್ಮನ ಗುಣಗಳ ಪರಿಚಯವು ಅಗತ್ಯವು. ಅಂಥಾ ಗುಣಗಳನ್ನು ಅಭಿವೃದ್ಧಿಪಡಿಸಬೇಕೆಂಬ ಅಭಿಲಾಷೆಯು ಜೀವನಲ್ಲಿರಬೇಕು. ಮತ್ತು ವಿಕಾಸಮಾರ್ಗದಲ್ಲಿ ಧೃಡವಾದ ಶ್ರದ್ಧೆಯು ಬೇಕು. ವಿಕಾಸಮಾರ್ಗದ ಧೃಡವಿಶ್ವಾಸದ ಹೊರತು ಯಥೇಷ್ಟ ಪ್ರವೃತ್ತಿಯೂ ಆಗುವುದಿಲ್ಲ. ಆದುದರಿಂದಲೇ ಆತ್ಮೋನ್ನತಿಯನ್ನು ಮಾಡಿಕೊಳ್ಳಬೇಕೆಂಬ ಅಭಿಲಾಷೆಯುಳ್ಳವರು ಪೂಜ್ಯ ಪುರುಷರುಗಳ ಅಥವಾ ಸಿದ್ಧಾತ್ಮರುಗಳ ಶರಣು ಹೊಂದಬೇಕು. ಅವರನ್ನು ಭಕ್ತಿಯಿಂದ ಭಜಿಸಬೇಕು. ಅವರ ಗುಣಗಳನ್ನು ಮನನ ಮಾಡುತ್ತಿರಬೇಕು. ಅವರನ್ನು ತಮಗೆ ಮಾರ್ಗ ತೋರಿಸುವವರೆಂಬುದಾಗಿ ತಿಳಿದು ಅವರ ಹಜ್ಜೆಯನ್ನು ಅನುಸರಿಸಿ ನಡೆಯಬೇಕು. ಅವರ ಉಪದೇಶಗಳಂತೆ ನಡೆಯಲು ಯತ್ನಿಸಬೇಕು.

ಯಾರಲ್ಲಿ ಆತ್ಮನ ಗುಣಗಳು ಹೆಚ್ಚು ಹೆಚ್ಚಾಗಿ ಅಥವಾ ಪೂರ್ಣರೂಪದಿಂದ ವಿಕಾಸವನ್ನು ಹೊಂದಿವೆಯೋ ಅವರೇ ನಮ್ಮೆಲ್ಲರಿಗೂ ಕಲ್ಯಾಣಮಾರ್ಗವನ್ನು ತೋರಿಸುವವರು. ಅಂತಹ ಮಹಾತ್ಮರುಗಳ ವಿಕಸಿತವಾದ ಆತ್ಮಸ್ವರೂಪದ ಭಜನೆ ಕೀರ್ತನೆಗಳು ಸಂಸಾರಿ ಪ್ರಾಣಿಗಳಿಗೆ ಉನ್ನತಿಯ ಸಾಧಕವಾಗಿವೆ. ನಾವು "ಸೋऽಹಂ" ಎಂಬ ಭಾವನೆಯಿಂದ ಅದನ್ನು ನಮ್ಮ ಜೀವನದಲ್ಲಿ ತನ್ಮಯಮಾಡಿಕೊಳ್ಳಬಲ್ಲೆವು.

ಪರಮಾತ್ಮಸ್ವರೂಪವನ್ನು ಆದರ್ಶವಾಗಿಟ್ಟುಕೊಂಡು ಸದಾಚಾರ ಮಾರ್ಗ ದಲ್ಲಿ ಮುಂದರಿಯುತ್ತ ಆತ್ಮೀಯ ಗುಣಗಳನ್ನು ವಿಕಾಸ ಮಾಡಿಕೊಂಡು ಅವರಂತೆ ಪವಿತ್ರರಾಗಬಲ್ಲೆವು. ಈ ಎಲ್ಲಾ ಅನುಷ್ಠಾನಗಳಲ್ಲಿ ಅವರ ಯಾವ ಸಂಬಂಧವೂ ಅಗತ್ಯವಿಲ್ಲ. ಇದಕ್ಕೆ ಅವರ ಪ್ರಸನ್ನತೆಯೂ ಅವಶ್ಯವಿಲ್ಲ. ಈ ಸಾಧನೆಗಳನ್ನು ತನ್ನ ಉನ್ನತಿಗೆಂದೇ ಮಾಡಬೇಕು. ಆದುದರಿಂದಲೇ ಸಿದ್ಧಿಯ ಸಾಧನೆಯಲ್ಲಿ "ಭಕ್ತಿಯೋಗ"ಕ್ಕೆ ಒಂದು ಮುಖ್ಯ ಸ್ಥಾನವು ಪ್ರಾಪ್ತವಾಗಿರುತ್ತದೆ. ಇದಕ್ಕೆ "ಭಕ್ತಿಮಾರ್ಗ"ವೆಂದು ಹೆಸರು.

ಸಿದ್ಧತ್ವವನ್ನು ಹೊಂದಿರುವ ಸಿದ್ಧಾತ್ಮರುಗಳನ್ನು ಭಕ್ತಿಯ ಮೂಲಕ ಭಜಿಸುವಿಕೆಯು "ಭಕ್ತಿಯೋಗ" ಅಥವಾ "ಭಕ್ತಿಮಾರ್ಗ"ವೆನಿಸುವುದು. ಭಕ್ತಿಯೆಂದರೆ ಅವರ ಗುಣಗಳಲ್ಲಿ ಅನುರಾಗವನ್ನಿಡುವುದು. ಆ ಗುಣ ಗಳಿಗೆ ಅನುಕೂಲವಾಗಿ ನಡೆಯುವುದು. ಸ್ತುತಿ, ಪ್ರಾರ್ಥನೆ, ವಂದನೆ, ಉಪಾಸನೆ, ಪೂಜೆ, ಸೇವೆ, ಶ್ರದ್ಧೆ, ಆರಾಧನೆ—ಇವೆಲ್ಲವೂ ಭಕ್ತಿಯ ರೂಪಗಳು. ಸ್ತುತಿ, ಪೂಜೆ, ವಂದನಾದಿಗಳಿಂದ ಈ ಭಕ್ತಿಯ ಕ್ರಿಯೆ ಯನ್ನು "ಸಮ್ಯಕ್ತ್ವವರ್ಧಿನೀ ಕ್ರಿಯೆ" ಎಂಬುದಾಗಿ ಹೇಳಿದ್ದಾರೆ. ಇದಕ್ಕೆ "ಶುಭೋಪಯೋಗ ಚಾರಿತ್ರ" ಅಥವಾ "ಕೃತಿಕರ್ಮ"ವೆಂಬುದಾಗಿಯೂ ಹೇಳುತ್ತಾರೆ. "ಪಾಪಕರ್ಮನಾಶದ ಅನುಷ್ಠಾನ"ವೆಂದು ಇನ್ನೊಂದು ವಿಧವಾಗಿಯೂ ಹೇಳುವುದುಂಟು.

ಸದ್ಭಕ್ತಿಯ ಮೂಲಕ ಅಹಂಕಾರವನ್ನು ತ್ಯಾಗಮಾಡಿ, ಗುಣಾನು ರಾಗವನ್ನು ಹೆಚ್ಚಿಸುವುದರಿಂದ ಉತ್ತಮ ಮತ್ತು ಶ್ರೇಷ್ಠ ಪರಿಣಾಮದ ಪ್ರಾಪ್ತಿಯಾಗದು. ಪರಿಣಾಮವಿಶುದ್ಧಿಗೋಸ್ಕರ ಮಾಡಿದ ಶ್ರೇಷ್ಠ ಪರಿ ಶ್ರಮವು ಪೂರ್ವಸಂಚಿತಕರ್ಮಗಳನ್ನು ನಾಶ ಮಾಡುವುದು. ಇತ್ತ ಸಂಚಿತಕರ್ಮನಾಶದಿಂದ ಗುಣಾವರೋಧಕ ಕರ್ಮಗಳ ನಿರ್ಜರೆಯಾಗು ವುದು. ಅತ್ತ ಆತ್ಮವಿಕಾಸದ ಗುಣಗಳ ಉದಯವಾಗುವುದು. ಆದುದ ರಿಂದಲೇ ಸ್ವಾಮಿ ಸಮಂತಭದ್ರಾಚಾರ್ಯರಂತಹ ಮಹಾ ಆಚಾರ್ಯರು ಗಳೂ ಪರಮಾತ್ಮನ ಸ್ತುತಿ ರೂಪದಲ್ಲಿ ಈ ಭಕ್ತಿಯು ಕುಶಲ ಪರಿ ಣಾಮಕ್ಕೆ ಕಾರಣವಾಗಿದೆಯೆಂದೂ ಅದರಿಂದಲೇ ಮುಕ್ತಿಮಾರ್ಗವು ಸುಲಭವಾಗಿ ಸ್ವಾಧೀನವಾಗುವುದೆಂದೂ ಹೇಳಿದ್ದಾರೆ.

# ಕರ್ಮಯೋಗ

ಘಟಿಕಾಪಾತ್ರಿಕನನ್ಯರೊಳ್ಕಥೆಯನೊಂದಂ ಸೂಚಿಸುತ್ತಿರ್ದೊಡಂ
ಸ್ಫುಟದಿಂ ಚಿತ್ತಮುಮಕ್ಷಿಯುಂ ಪದಪದಕ್ಕಾ ಪಾತ್ರಿಯುಂ ಸಾರ್ಗುವೆಂ
ತುಟು ತಾನಂತುಟು ಬಾಹ್ಯದೊಳ್ನಿಗಳ್ದೊಡಂ ಧ್ಯಾನಂ ಕ್ಷಣಕ್ಕೊರ್ಮೆ ಸಂ
ಘಟಿಸಲ್ಕಿನ್ನು ಪದಂಗಳೊಳ್ಸಬಿಯಲಾ ರತ್ನಾಕರಾಧೀಶ್ವರಾ

ಯೋಗ ಶಬ್ದಕ್ಕೆ ಸಂಬಂಧವೆಂದೂ, ಕರ್ಮಯೋಗವೆಂದರೆ ಕರ್ಮದ ಸಂಬಂಧವೆಂದೂ ಅರ್ಥ. ಜೀವಾತ್ಮನು ಅನಾದಿಕಾಲದಿಂದ ಕರ್ಮ ಸಂಯೋಗಪರಂಪರೆಯಿಂದ ಸಂಸಾರದಲ್ಲಿ ತಿರುಗುತ್ತಿದ್ದಾನೆ. ಅಜ್ಞಾನ ದಿಂದ ಸ್ವಸ್ವರೂಪವನ್ನು ಮರೆತು ಜಡದ್ರವ್ಯಸಂಯೋಗದಿಂದ ತನ್ನಲ್ಲಾ ಗುವ ಪರ್ಯಾಯವೇ ತಾನೆಂದು ಭಾವಿಸಿ ಜೀವನು ಸಂಸಾರದಲ್ಲಿ ಆಸಕ್ತನಾಗಿರುತ್ತಾನೆ. "ತಾನು ಕರ್ಮಪುದ್ಗಲದಿಂದ ಕ್ಷೀರಾಭಿನ್ನನು, ಜ್ಞಾತಾ, ದೃಷ್ಟಾ, ವೀತರಾಗನು, ತನ್ನ ನಿಜವಾದ ಸುಖವು ತನ್ನಲ್ಲಿಯೇ ಇದೆ. ತಾನು ಸ್ವಯಂ ಪರಮಾತ್ಮ ಸ್ವರೂಪನು" ಎಂಬುದಾಗಿ ಭಾವಿಸಿ ತನ್ನಲ್ಲಿರುವ ಮಿಥ್ಯಾಬುದ್ಧಿಯನ್ನು ಜೀವನು ಬಿಟ್ಟನೆಂದರೆ, ಅವನ ಸ್ವಸ್ವರೂಪಾಸಕ್ತಿಯು ಅವನನ್ನು ಸಂಸಾರದಿಂದ ದೂರಮಾಡುವುದು. ಆ ಭಾವನೆಯೇ ಅವನಿಗೆ ಮೋಕ್ಷಹೇತುವಾಗುವುದು. ಆಗ ಪೂರ್ವ ಕೃತಕರ್ಮದಿಂದ ದೂರನಾಗಿ ಅದರಲ್ಲಿ ಆತನು ಅನಾಸಕ್ತನಾಗಿರುತ್ತಾನೆ. ಪುಣ್ಯ ಮತ್ತು ಪಾಪದ ಸುಖದುಃಖ ಫಲಗಳನ್ನು ಜೀವನು ಸಂಸಾರಾ ವಸ್ಥೆಯಲ್ಲಿ ಅನುಭವಿಸುತ್ತಾನೆ. ಜೀವನು ಶುದ್ಧ ಭಾವನೆಯಿಂದ ಪೂರ್ವ ಸಂಚಿತಕರ್ಮಗಳನ್ನು ನಾಶಮಾಡಿದ ಬಳಿಕ ಹೊಸ ಕರ್ಮಬಂಧವಾಗ ದಂತೆ ಮಾಡಿಕೊಳ್ಳುತ್ತಾನೆ. ಜ್ಞಾನಿ ಸಮ್ಯಗ್ದೃಷ್ಟಿ ಜೀವನು ಕರ್ಮ ದಿಂದ ಆಸಕ್ತನಾಗಿರುವುದಿಲ್ಲ.

ಜೀವನಲ್ಲಿ ಎಷ್ಟು ಯೋಗಾಭ್ಯಾಸ ಅಥವಾ ಆತ್ಮಾನುಭವ ಹೆಚ್ಚು ತ್ತದೋ ಅಷ್ಟು ಹೆಚ್ಚು ಕರ್ಮನಾಶವಾಗುತ್ತದೆ. ಈ ತರಹದ ಪರಿಣಾ ಮದ ಜೀವನು ಸಂಸಾರದಲ್ಲಿದ್ದರೂ, ನೀರಿನಲ್ಲಿರುವ ಕಮಲದಂತೆ ಅನಾ

ಸಕ್ತನಾಗಿದ್ದು ಗೃಹಸ್ಥನಿಗೆ ಯೋಗ್ಯವಾದ ಸರ್ವಕಾರ್ಯಗಳನ್ನು ಮಾಡು ತ್ತಿದ್ದರೂ, ಮೋಕ್ಷಮಾರ್ಗದ ಮೇಲೆಯೇ ಅವನ ದೃಷ್ಟಿಯಿರುತ್ತದೆ. ಅವನ ಪ್ರೇಮವು ನಿಜವಾದ ತತ್ತ್ವದ ಮೇಲಿರುತ್ತದೆ. ಆ ತತ್ತ್ವದಿಂದ ಆತನಲ್ಲಿ ವೈರಾಗ್ಯವುಂಟಾಗುತ್ತದೆ. ಅಂಥಾ ಜ್ಞಾನಿಯ ಎಲ್ಲಾ ಕರ್ಮ ಗಳೂ ನಿಷ್ಕಾಮಕರ್ಮಗಳೇ ಆಗಿರುತ್ತವೆ. ಅವನು ಪರೋಪಕಾರ, ದಾನ, ಧರ್ಮ ಮೊದಲಾದುವುಗಳನ್ನು ಮಾಡುತ್ತಿದ್ದರೂ, ಅವುಗಳಲ್ಲಿ ಯಾವುದಾದರೊಂದು ರೀತಿಯ ಲೌಕಿಕ ಅಥವಾ ಪಾರಲೌಕಿಕ ಫಲದ ಇಚ್ಛೆಯನ್ನಿಟ್ಟುಕೊಂಡಿರುವುದಿಲ್ಲ. ಅವನು ಕೇವಲ ಪರಿಶುದ್ಧ ಸ್ವಭಾವದ ಪ್ರೇಮಿಯಾಗಿರುತ್ತಾನೆ. ಅವನಲ್ಲಿರುವುದು ಸ್ವತಂತ್ರತೆಯ ಅಥವಾ ಸ್ವಾಧೀನತೆಯ ಭಾವನೆ ಮಾತ್ರ.

ಹೀಗೆ ಮುಮುಕ್ಷುವಿನ ರಾಗವು (ಅಪೇಕ್ಷೆಯು) ಬಹಳ ಕ್ಷೀಣಿಸಿ ತೆಂದರೆ, ಅವನು ವಿರಕ್ತಸಾಧುವಾಗುತ್ತಾನೆ. ಸರ್ವ ಪರಿಗ್ರಹವನ್ನೂ ಬಿಡುತ್ತಾನೆ. ಆತ್ಮಧ್ಯಾನದ ಅಭ್ಯಾಸವನ್ನು ವಿಶೇಷವಾಗಿ ಮಾಡುತ್ತಾನೆ. ಈ ಆತ್ಮಾನುಭವರೂಪ ಸಮಾಧಿಭಾವವು ಹೆಚ್ಚಲು, ಯಾರಾದರೂ ತನ್ನನ್ನು ದುರ್ವಚನದಿಂದ ಸಂಬೋಧಿಸಿದರೂ ಆತನು ದ್ವೇಷವನ್ನು ತಾಳುವುದಿಲ್ಲ. ಶರೀರಕ್ಕೆ ವಧಬಂಧನಾದಿ ಉಪಸರ್ಗವೊದಗಿದರೂ, ಆತನಲ್ಲಿ ಕ್ರೋಧಭಾವವುಂಟಾಗುವುದಿಲ್ಲ. ಜಡಶರೀರವು ಚಂಚಲವಾ ದರೂ ಆತ್ಮೀಯ ದೃಢತೆಯು ಆತನಲ್ಲಿರುವುದು. ಈ ರೀತಿಯ ಸಮಾಧಿ ಭಾವದಿಂದೊಡಗೂಡಿದ ಸ್ಥಿತಿಯಲ್ಲಿ ಮುನಿಯು ಹೆಚ್ಚಿನ ಕರ್ಮವನ್ನು ದೂರಮಾಡುತ್ತಾನೆ. ಕರ್ಮಬಂಧಕ್ಕೆ ಮೂಲಕಾರಣವಾದ ರಾಗದ್ವೇಷ ಮತ್ತು ಮೋಹವು ಆತನಲ್ಲಿರುವುದಿಲ್ಲ. ಅವುಗಳಿಂದ ಜೀವನು ವಿರಕ್ತ ನಾದನೆಂದರೆ ಅವನು ಜೀವನ್ಮುಕ್ತ—ಅರ್ಹಂತನಾಗುತ್ತಾನೆ. ಶರೀರದ ಆಯುಃಪ್ರಮಾಣವು ತೀರಿತೆಂದರೆ, ಶುದ್ಧ ಸಿದ್ಧಪರಮಾತ್ಮತ್ವವನ್ನು ಹೊಂದು ತ್ತಾನೆ. ತನ್ನಿಂದ ತಾನೇ ಉದ್ಧಾರ ಹೊಂದುತ್ತಾನೆ.

# ಜೈನ ಧರ್ಮದ ಉದಾರತೆ

ಒಂದು ಧರ್ಮದ ಉದಾರತೆಯು ಆ ಧರ್ಮದ ಅನುಯಾಯಿಗಳ ದೈನಂದಿನದ ಚರ್ಯೆಯಿಂದಲೂ ಸ್ವಭಾವಪರಿಪಾಕದಿಂದಲೂ ಪ್ರಕಟವಾಗುತ್ತದೆ. ಈ ದೃಷ್ಟಿಯಿಂದ ಪರ್ಯಾಲೋಚಿಸುವಲ್ಲಿ, ಬಹಳ ಪ್ರಾಚೀನ ಕಾಲದಿಂದಲೂ ಆಸೇತುಹಿಮಾಚಲದ ಜೈನರು ತಮ್ಮ ಪರಮೋದಾರ ಹೃದಯದಿಂದ ಪ್ರಗತಿಪರ ಸಮಾವೇಶಗಳನ್ನು ಕೈಗೊಟ್ಟು ನಡೆಸಿ, ಸಮನ್ವಯದೃಷ್ಟಿಯಿಂದ ನ್ಯೂನಾಧಿಕ್ಯಗಳನ್ನು ಸರಿಪಡಿಸಿ, ದೇಶದ ಸುಧಾರಣೆಗೆ, ದೇಶದ ಏಳಿಗೆಗೆ ಕಾರಣಪುರುಷರಾಗಿದ್ದುದು ಚರಿತ್ರಾಂಕಿತವಾಗಿದೆ. ಜೈನರಷ್ಟು ಪರಮತಸಹಿಷ್ಣುಗಳು ಮತ್ತು ವ್ಯಾಪಕದೃಷ್ಟಿಯುಳ್ಳವರು ಬೇರೆಯವರಿಲ್ಲವೆಂದು ಹೇಳುವ ಮಾತು ಅಕ್ಷರಶಃ ಸತ್ಯವಾಗಿದೆ. ಜೈನರು ಯಾವ ಮಂದಿರವನ್ನೂ ಕೆಡಹಲಿಲ್ಲ; ಒಂದು ಕಾಲದಲ್ಲಿ ಜಿನಮಂದಿರಗಳನ್ನು ಕೆಡಹಿ, ದೇವಸ್ಥಾನಗಳನ್ನು ಅವುಗಳ ಸ್ಥಾನದಲ್ಲಿ ಕಟ್ಟಿಸಿದ ನಿದರ್ಶನಗಳು ಹಲವು ಇದ್ದರೂ ಹಿಂದುಗಳ ದೇವಸ್ಥಾನಗಳಿಗೆ ಜೈನರು ಉಂಬಳಿಯನ್ನು ಬಿಟ್ಟುಕೊಟ್ಟ ಉದಾಹರಣೆಗಳು ಹಲವಿವೆ. ಭಾರತೀಯ ಸಂಸ್ಕೃತಿಗೂ ಕಲೆಗಳಿಗೂ ಜೈನರು ಕೊಟ್ಟ ಪ್ರೋತ್ಸಾಹಕ್ಕೆ ಮಿತಿಯಿಲ್ಲ.

ಬಹಳ ಪ್ರಾಚೀನ ಕಾಲದಿಂದಲೂ ಜೈನಧರ್ಮದಲ್ಲಿ ಉದಾರತೆಯೂ ವಿಶ್ವವ್ಯಾಪಕದೃಷ್ಟಿಯೂ ಮುಖ್ಯವಾದ ಲಕ್ಷಣಗಳಾಗಿದ್ದುವು. ಈ ಎರಡು ಲಕ್ಷಣಗಳ ಕಾರಣದಿಂದಲೇ ಜೈನ ಧರ್ಮವು ಅಂದಿನಿಂದ ಇಂದಿನ ತನಕ ಬಾಳಿ ಬರುವಂತಾಯಿತು. ಮೂರುವರೆ ಸಾವಿರ ವರ್ಷಗಳ ಹಿಂದೆ ಸಮಸ್ತ ಭಾರತ ದೇಶವು ತುರೇನಿಯರಿಂದ ಅಥವಾ ದ್ರಾವಿಡರಿಂದ ಆಳಲ್ಪಡುತ್ತಿದ್ದಾಗ, ಸರ್ಪ, ಮರ ಮೊದಲಾದುವುಗಳ ಆರಾಧನೆಯೇ ಮುಖ್ಯವಾಗಿದ್ದಾಗ, ಜನರ ಜೀವನದಲ್ಲಿ ಸಂಸ್ಕಾರವು ತಲೆದೋರದಿದ್ದಾಗ, ಜನರ ವರ್ತನೆ ಇನ್ನೂ ದಯಾಪೂರ್ಣವಾಗದಿದ್ದಾಗ—ಉದಾರತೆಯಿಂದ, ವಿಶ್ವವ್ಯಾಪಕ ದೃಷ್ಟಿಯಿಂದ, ಪರಮತಸಹಿಷ್ಣುತೆಯಿಂದ ಈ ಧರ್ಮವು ತಲೆಯೆತ್ತಿ ಬಂತು.

ಜೈನ ಧರ್ಮದ ಪ್ರಾಚೀನತೆಯ ವಿಚಾರವನ್ನು ನಾವು ಮತ್ತೆ ಮತ್ತೆ ಪ್ರಸ್ತಾವಿಸುವ ಅಗತ್ಯವಿಲ್ಲ. ಅದರ ಪ್ರಾಚೀನತೆಯು ಪೌರಾಣಿಕ ಮತ್ತು ಐತಿಹಾಸಿಕ ಸಿದ್ಧಾಂತಗಳಿಂದ ನಿಶ್ಚಯಿಸಲ್ಪಟ್ಟಿದೆ. ಹಿಂದುಗಳ ಪ್ರಾಚೀನ ಗ್ರಂಥಗಳಾದ ಋಗ್ವೇದಾದಿಗಳಲ್ಲಿ ಜೈನ ತೀರ್ಥಂಕರರುಗಳ ಉಲ್ಲೇಖವಿದೆ. ಹೊಸರಾಂತ ಪಾಶ್ಚಾತ್ಯ ವಿದ್ವಾಂಸರುಗಳಾದ ಪಿಟರ್‌ಸಿಬ್, ಜಾಕೊಬಿ, ಫರ್ಲಾಂಗ್ ಮೊದಲಾದವರು ಐತಿಹಾಸಿಕ ಸಂಶೋಧನೆಗಳಿಂದ ಜೈನ ಧರ್ಮದ ಪ್ರಾಚೀನತೆಯನ್ನು ಸಿದ್ಧಮಾಡಿರುತ್ತಾರೆ. ಪ್ರಸಿದ್ಧ ವಿದ್ವಾಂಸರಾದ ಫರ್ಲಾಂಗರು ತಮ್ಮ "Short Studies of Comparative Religion" ಎಂಬ ಗ್ರಂಥದಲ್ಲಿ ಹೀಗೆ ಅಭಿಪ್ರಾಯಪಡುತ್ತಾರೆ: "All Upper, Western, North and Central India was then, say 1500 to 800 B. C. and indeed from unknown times, ruled by Turanians, conveniently called Dravidas and given to tree, serpant, and the like worship......but there also existed throughout upper India, an ancient and highly organised religion, philosophical, ethical and severely ascetical, viz., Jainism.—ಕ್ರಿ. ಪೂ. 1500ರಿಂದ 800 ವರ್ಷಗಳ ಮೊದಲು ಇತಿಹಾಸಕ್ಕೆ ನಿಲುಕದ ಸಮಯದಿಂದಲೂ ಹಿಂದುಸ್ಥಾನದ ನಾಲ್ಕು ದಿಕ್ಕುಗಳಲ್ಲೂ ಭಾರತದೇಶವು ತುರಾನಿ ಯಾನೆ ದ್ರಾವಿಡರಿಂದ ಆಳಲ್ಪಟ್ಟಿತ್ತು. ಅವರು ಸರ್ಪ, ಮರ ಮೊದಲಾದುವುಗಳ ಆರಾಧಕರಾಗಿದ್ದರು. ಆದರೆ ಅಂದೂ ಉತ್ತರ ಭಾರತದಲ್ಲಿ ಪ್ರಾಚೀನವಾದ ಉತ್ತಮ ರೀತಿಯ ತತ್ತ್ವಜ್ಞಾನದಿಂದ ತುಂಬಿದ, ಸದಾಚಾರ ರೂಪವಾದ ಮತ್ತು ಕಠಿನ ತಪಶ್ಚರ್ಯೆಯಿಂದ ಕೂಡಿದ ಧರ್ಮವು, ಅರ್ಥಾತ್, ಜೈನ ಧರ್ಮವು ಅಸ್ತಿತ್ವದಲ್ಲಿತ್ತು." ಇಂಥ ಎಷ್ಟೋ ಆಧಾರಗಳನ್ನು ಕೊಡಬಹುದು. ಅದಂತಿರಲಿ.

ಇಂತಹ ಪವಿತ್ರವಾದ ಜೈನ ಧರ್ಮವನ್ನು ಮತಾಂಧತೆಯಿಂದ, ಅಜ್ಞಾನದಿಂದ ದೂಷಿಸಿ ಹಿಂದೆ ಕೆಲವು ಗ್ರಂಥಗಳನ್ನು ಬರೆದಿದ್ದರು. ಆದರೆ ಇಂದಿನ ವಿದ್ವಮಾನಗಳನ್ನು ಯೋಚಿಸುವಾಗ ಅದೊಂದು ಸೋಜಿಗವಾಗಿ ಕಾಣಲಾರದು. ಏತಕ್ಕೆಂದರೆ, ಒಂದು ಕಾಲದಲ್ಲಿ ಭಾರತದೇಶವೆಲ್ಲ,

ಬೇರೆ ಬೇರೆ ಧಾರ್ಮಿಕ ಪಂಥಗಳಾಗಿ ಒಡೆದು ಹೋಗಿ, ದ್ವೇಷಾಸೂಯೆ ಗಳ ಗೋಡೆಗಳನ್ನು ಕಟ್ಟಿ, ಸಂಕುಚಿತ ಸಂಕುಚಿತವಾಗುತ್ತ ಬರುತ್ತಿ ದ್ದಿತು. ಒಬ್ಬ ಪ್ರಸಿದ್ಧ ವಿದ್ವಾಂಸರಂದಂತೆ, ದ್ವೈತ, ಅದ್ವೈತ, ವಿಶಿಷ್ಟಾ ದ್ವೈತವೆಂದು ಧರ್ಮಬೋಧಕರು ಭಾರತದ ಬೇರೆ ಬೇರೆ ಪ್ರಾಂತಗಳಲ್ಲಿ ಜನ್ಮಿಸಿ ಹಿಂದುಗಳನ್ನು ಒಬ್ಬರೊಡನೊಬ್ಬರು ಸೇರದಂತೆ ಭೇದಿಸಿದರು. ಹೀಗಿರುತ್ತಿದ್ದಾಗ ಹಿಂದೂ ಧರ್ಮದಿಂದ ತೀರ ಭಿನ್ನವಾದ ಜೈನ ಧರ್ಮ ವನ್ನು ದ್ವೇಷಿಸಿದುದು ವಿಶೇಷವಲ್ಲ. ಸಮಯಾಗತ ಪ್ರಭಾವದಿಂದ ಜೈನ ಧರ್ಮದ ದೂಷಣೆಯೂ ಪರಸ್ಪರ ಭಿನ್ನಪಂಥಗಳ ದೂಷಣೆಯೂ ಯಥೇಚ್ಛ ವಾಗಿ ನಡೆದಿತ್ತು.

ಆದರೆ, ಇಂದಿನದು ವಿಜ್ಞಾನಯುಗ. ವಿಜ್ಞಾನಯುಗದ ತುಲನಾ ತ್ಮಕ ವಿಮರ್ಶಾಕಾಶದ ಅಡಿಯಲ್ಲಿ ಮತದ್ವೇಷವು ಚಿಗುರುವುದಿಲ್ಲ. ಪ್ರತಿಯೊಬ್ಬ ಮತೀಯನು ತನ್ನ ಮತತತ್ತ್ವದೊಡನೆ ಇತರ ಮತಗಳ ಸಾರ ವನ್ನು ತಿಳಿಯಲು ಆಸಕ್ತಿಯುಳ್ಳವನಾಗಿರುತ್ತಾನೆ. ತುಲನಾತ್ಮಕ ದೃಷ್ಟಿಯ ಅಭ್ಯಾಸದಿಂದು ಮತಖಂಡನೆಯನ್ನು ದೂರ ಸರಿಸಿರುತ್ತದೆ. ಆದುದರಿಂದ ಜೈನ ಧರ್ಮದ ವಿಚಾರವಾಗಿ ಮೊದಲಿದ್ದ ಮಿಥ್ಯಾ ಅಭಿಪ್ರಾಯಗಳು ತಿದ್ದಲ್ಪಟ್ಟಿರುತ್ತವೆ. ಜೈನ ಧರ್ಮದ ಪ್ರಾಚೀನತೆಯನ್ನು ಅನ್ಯ ವಿದ್ವಾಂ ಸರು ಒಪ್ಪಿರುತ್ತಾರೆ. ಜಗತ್ತಿಂದು ಹೊಸ ಯುಗದಲ್ಲಿ ಜೀವಿಸುತ್ತದೆ; ಮನುಷ್ಯನ ದೃಷ್ಟಿಯಿಂದ ಹೊಸ ಮೂಲೆಯಿಂದ ನೋಡುತ್ತಿದೆ. ಮನು ಷ್ಯನ ಜೀವನವೇ ಬೇರೆಯಾಗಿದೆ, ಮನುಷ್ಯನ ಹೃದಯವೇ ರೂಪಾಂತರ ವಾಗಿದೆ.

ಜೈನರು ತಮ್ಮ ಕರ್ತವ್ಯವನ್ನು ಮನಮುಟ್ಟಿ ತಿಳಿಯಬೇಕಾಗಿದೆ. ಜೈನ ಧರ್ಮದ ವಿಚಾರದಲ್ಲಿದ್ದ ಮಿಥ್ಯಾ ಅಭಿಪ್ರಾಯಗಳನ್ನು ಹೋಗಲಾಡಿ ಸಲು ಭಾರತದ ಪ್ರತಿಭಾಷೆಗಳಲ್ಲಿ ನಾವು ತಕ್ಕ ಪ್ರಚಾರ ಕೆಲಸವನ್ನು ಮಾಡಬೇಕಾಗಿದೆ. ಜೈನ ವಿದ್ವಾಂಸರೂ ಜೈನ ಶ್ರೀಮಂತರೂ ಇದಕ್ಕೆ ನೆರವಾಗಿ ಗಂಭೀರವಾದ ಶೈಲಿಯಲ್ಲಿ ಜೈನಧರ್ಮವನ್ನು ಬರೆದು ಪ್ರಕ ಟಿಸಿ, ಅಜೈನರಲ್ಲಿರುವ ಮಿಥ್ಯಾ ಭಾವನೆಗಳನ್ನು ಸರಿಪಡಿಸಲು ಯತ್ನಿಸ ಬೇಕು. ಇದು ಪ್ರತಿಯೊಬ್ಬ ಜೈನಬಾಂಧವನ ಕರ್ತವ್ಯವಾಗಿರುತ್ತದೆ.

# ದೇವಪೂಜೆ

ಮನುಷ್ಯನ ಶ್ರೇಯೋಭಿವೃದ್ಧಿಗೆ ಸಾಧಕಗಳಾದ ಕ್ರಿಯೆಗಳಲ್ಲಿ ದೇವಪೂಜೆ, ಗುರುಸೇವೆ, ಸ್ವಾಧ್ಯಾಯ, ಸಂಯಮ, ತಪ ಮತ್ತು ದಾನ—ಇವುಗಳು ಮುಖ್ಯವಾಗಿವೆ. ಇವುಗಳಲ್ಲಿ ದೇವಪೂಜೆಯೇ ಬಹು ಮುಖ್ಯವಾದುದು. ಸರ್ವ ಮಂಗಲಗಳಲ್ಲಿ ಅದೇ ಮೊದಲನೆಯ ಮಂಗಲವು. ನಿತ್ಯದ ಅನುಷ್ಠಾನಗಳನ್ನು ತೀರಿಸಿ ಅಷ್ಟವಿಧಾರ್ಚನೆಯಿಂದ ಶ್ರೀ ಅರ್ಹತ್ ಪರಮೇಷ್ಠಿಯನ್ನು ಅನನ್ಯಭಕ್ತಿಯಿಂದ ಪೂಜಿಸಿದ ಜೀವನಿಗೆ ಸಕಲ ಕಾರ್ಯಗಳಲ್ಲಿ ಶ್ರೇಯಸ್ಸುಂಟಾಗುವುದರಲ್ಲಿ ಸಂಶಯವಿರುವುದಿಲ್ಲ. ಆ ಭಗವಂತನ ಪವಿತ್ರವೂ ಶ್ರೇಷ್ಠವೂ ಸುಂದರವೂ ಆದ ತತ್ವವನ್ನು ನೆನೆದ ಮಾತ್ರಕ್ಕೆ ಅರ್ಚಿಸುವವನ ಆತ್ಮವು ಆ ಕ್ಷಣವೊಂದರಲ್ಲಾದರೂ ಉದ್ಧರಿಸಲ್ಪಟ್ಟು, ಪ್ರಕಾಶಿತವಾಗಿ, ಪವಿತ್ರವಾಗಿ, ಕೋಮಲವಾಗಿ ಸಂಸ್ಕಾರವನ್ನು ಪಡೆಯುವುದು. ಅಂತಹ ಸಂಸ್ಕಾರವನ್ನು ಪಡೆದ ಆತ್ಮಕ್ಕೆ ಸಂಸಾರಯಾತ್ರೆಯನ್ನು ಸುಗಮವಾಗಿ ಮಾಡಲಿಕ್ಕಾಗುತ್ತದೆ. ಆದರೆ, ಇಂದಿನ ದಿವಸ ಸಂಸಾರದ ಕೋಲಾಹಲವು; ಜೀವನದ ಸುಳಿಗಳು ಭಕ್ತಿಯ ಭಾವವನ್ನು ಮುಳುಗಿಸಿ ಬಿಟ್ಟಿರುತ್ತವೆ; ಇಂದಿನ ದಿವಸ ಸುಖದ ಒಂದು ಕ್ಷಣದಲ್ಲಾಗಲಿ ದುಃಖದ ಒಂದು ಕ್ಷಣದಲ್ಲಾಗಲಿ ದೇವರ ಕಡೆಗೆ ಮನಸ್ಸನ್ನರಳಿಸುವುದಕ್ಕೆ ಮನುಷ್ಯನಿಗೆ ಬಿಡುವಿರುವುದಿಲ್ಲವು. ಆದುದರಿಂದಲೇ ಸುಖದಿಂದ ಮತ್ತು ದುಃಖದಿಂದ ಹೆಣೆಯಲ್ಪಟ್ಟ ಈ ಸಂಸಾರದಲ್ಲಿ ಸುಖದ ಅನುಭವವು ಕೃತ್ರಿಮವಾಗುತ್ತಿದೆ; ದುಃಖದ ಅನುಭವವು ಅಸಹ್ಯವಾಗುತ್ತಿದೆ. ಯಾವಂದು ಸುಖದುಃಖಗಳೆರಡೂ ಮನುಷ್ಯನಿಗೆ ಅನಶ್ಯಂಭಾವಿಗಳೊ ಅವುಗಳನ್ನು ಅನುಭವಿಸುವ ಆತ್ಮನಿಗೆ ಅಗತ್ಯವಿರುವ ಸಂಸ್ಕಾರವು ಕೂಡಿ ಬರುವುದಿಲ್ಲವೋ ಅಂದು ಜೀವನವು ಕೃತ್ರಿಮವಾಗಿಯೇ ಸಾಗುತ್ತಿದೆ; ಬರಿದಾಗಿಯೇ ಮುಗಿಯುತ್ತಿದೆ.

ಅರ್ಹತ್ಪೂಜೆಯನ್ನು ಮಾಡಲು ಸಮಯವು ದೊರಕುವುದೇ ಅಸಾಧ್ಯವೆಂಬೀ ಭಾವನೆಯು ನೆವನವಾಗಿ ಹೆಚ್ಚಿನ ಜನರಿಂದ ಕೊಡಲ್ಪಡುತ್ತಿದೆ.

ಅನ್ನೋದು ಸೇವನದಿಂದಲೆ ಜನರಿಂದು ದೇವರೊಡನೆ ದೇವರ ಸಾಕ್ಷಾತ್ಕಾರದಲ್ಲಿ ತಮ್ಮ ಆತ್ಮವನ್ನು ಕ್ಷಣವೊಂದಾದರೂ ಕೂಡಿಸುವ ಯೋಚನೆಯನ್ನು ಬಿಟ್ಟಿರುತ್ತಾರೆ. ಆದರೆ ಈ ಕೆಳಗೆ ಕೊಟ್ಟ ಅಭಿಪ್ರಾಯವನ್ನು ಓದಿದರೆ, ಅಂತಹವರು ಕೊಡುವ ನೆವನದಲ್ಲಿ ಎಳ್ಳಷ್ಟೂ ಹುರುಳಿಲ್ಲವೆಂದು ಮನಗಾಣಬಹುದು. "It is often said that time is wanted for the duties of religion. The calls of business, the press of occupation, the cares of life, will not suffer me, says one, to give that time to the duties of piety which otherwise I would gladly bestow.........you have no time, then, for the special service of that great Being whose goodness alone has drawn out to its present length your cobweb thread of life, whose care alone has continued you in possession of that unseen Property which you call your time.—ಧರ್ಮಕೃತ್ಯಗಳನ್ನು ಮಾಡಲು ಸಮಯಾಭಾವವೆಂದು ಹೇಳುವುದುಂಟು. ವ್ಯಾಪಾರದ ವಹಿವಾಟುಗಳು, ಉದ್ಯೋಗದ ಒತ್ತಡಗಳು ಜೀವನದ ಸುಖದುಃಖಗಳು ಧರ್ಮಕೃತ್ಯಗಳಿಗಾಗಿ ಸಮಯವನ್ನು ಮೀಸಲಾಗಿಡಲು ಸಾಧ್ಯಮಾಡಿಕೊಡುವುದಿಲ್ಲ. ಇಲ್ಲದಿದ್ದಲ್ಲಿ ಸಂತೋಷದಿಂದ ಆ ಧರ್ಮಕೃತ್ಯಗಳನ್ನೆಲ್ಲ ಮಾಡುತ್ತಿದ್ದೆ........ ಹಾಗೇಂದರೆ, ಯಾವ ಭಗವಂತನ ಕೃಪೆಯಿಂದ ನಿನ್ನ ಜೀವನದ ಸೂತ್ರಗಳಿವು ಇಷ್ಟು ದೀರ್ಘವಾಗಿ ಬಂದಿರುತ್ತವೋ, ಯಾವ ಭಗವಂತನ ದಯೆಯಿಂದ ನೀನಿಂದು ಕಣ್ಣಿಗೆ ಕಾಣದ ಕಾಲವೆಂಬ ಈ ಸಮಸ್ತ ಸಂಪತ್ತನ್ನು ಅನುಭವಿಸುತ್ತಿಯೋ ಆ ಮಹಾಮಹಿಮನ ಸೇವೆಗಾಗಿ ನಿನಗೆ ಸಮಯವಿಲ್ಲವೆಂದಾಯ್ತು."

ಪೂಜೆಯನ್ನು ತಮ್ಮ ತಮ್ಮ ಮನೆಗಳಲ್ಲಿ ಏಕಾಂಗಿಯಾಗಿ ಮಾಡುವುದು ಆಗತ್ಯವಾದರೂ ಅಂಥಾ ಪೂಜೆಗಳನ್ನು ಮನೆಗಿಂತ ಜಿನಮಂದಿರಗಳಲ್ಲಿ ಮಾಡಿದರೆ ಅದರಲ್ಲಿ ಹೆಚ್ಚಿನ ಮಹತ್ತ್ವವಿದೆ. ಇಂಥಾ ಪೂಜೆಗಳನ್ನು ಆಯಾ ಊರಿನ ಸಮಸ್ತ ಶ್ರಾವಕರು ಸೇರಿ ಸಮುದಾಯದಿಂದ

ಮಾಡಿದಲ್ಲಿ ಪೂಜಕರಲ್ಲಿ ಒಂದು ರೀತಿಯ ಧಾರ್ಮಿಕ ಉತ್ಸಾಹವು ಉಂಟಾಗುತ್ತದೆ. ನಮ್ಮ ಪೂರ್ವಿಕರು ಅಲ್ಲಲ್ಲಿ ವಿಶಾಲವಾದ ಜಿನಮಂದಿರಗಳನ್ನು ನಿರ್ಮಿಸಿದ ಪ್ರಯೋಜನವಾದರೂ ಏನು? ಪ್ರತಿ ಗ್ರಾಮಗಳಲ್ಲಿ ಒಂದೋ ಎರಡೋ ಜಿನಾಲಯಗಳು ಏಕೆ? ಎಂದು ವಿಚಾರಿಸಿದರೆ ಪೂರ್ವದಲ್ಲಿ ಸಮುದಾಯ ಪೂಜೆಯು ನಡೆಯುತ್ತಿತ್ತೆಂದು ತಿಳಿಯುವುದು.

ಹಲವರು ಸೇರಿ ಪೂಜಿಸುವುದರಿಂದ ಬಾಹ್ಯ ಪ್ರಭಾವನೆಯು ಹೆಚ್ಚುವುದು. ದೊಡ್ಡವರು ಚಿಕ್ಕವರು, ಬಡವರು ಬಲ್ಲಿದರು ಎಂಬ ಭಾವನೆಯು ದೂರವಾಗುವುದು. ಎಲ್ಲರೂ ಒಮ್ಮನಸ್ಸಿನಿಂದ ಭೇದಭಾವವನ್ನಿಡದೆ ಶ್ರೀ ಅರ್ಹತ್ಪೂಜೆಯನ್ನು ಮಾಡುವರು. ತಮ್ಮಲ್ಲಿದ್ದ ದ್ವೇಷಾಸೂಯೆಗಳು ದೂರವಾಗಿ ಮೈತ್ರೀಭಾವವು ನೆಲೆಗೊಳ್ಳುವುದು.

ಈ ದೃಷ್ಟಿಯಿಂದಲೇ ಪೂರ್ವಿಕರು ಹಳ್ಳಿಹಳ್ಳಿಗಳಲ್ಲಿ ಜಿನಾಲಯಗಳನ್ನು ಕಟ್ಟಿಸಿದರು. ಅವುಗಳನ್ನು ಆಕರ್ಷಣೀಯವನ್ನಾಗಿ ಮಾಡಿದರು. ಅವುಗಳನ್ನು ಕಲೆಯ ಬೀಡಾಗಿ ರಚಿಸಿದರು. ನಿತ್ಯವೂ ಜಿನಾಲಯಕ್ಕೆ ಹೋಗಿ ಪೂಜಿಸಲು ದೂರ ನಿವಾಸಿಗಳಿಗೆ ಅನಾನುಕೂಲವಾಗಬಹುದು. ಆದರೆ ಅಷ್ಟಮಿ ಚತುರ್ದಶಿ ಮೊದಲಾದ ವ್ರತ ದಿನಗಳಲ್ಲಿ ತಪ್ಪದೆ ಜಿನಾಲಯಕ್ಕೆ ಹೋಗಿ ಸಮುದಾಯ ಪೂಜೆಯ ಪದ್ಧತಿಯನ್ನು ಅವಶ್ಯವಾಗಿಯೂ ಇಟ್ಟುಕೊಳ್ಳಬೇಕು. ಹಿರಿಯರು ಯಾವ ಉದ್ದೇಶದಿಂದ ಕಲಾಮಂದಿರಗಳಲ್ಲಿ ಜಿನಮೂರ್ತಿಗಳನ್ನು ಸ್ಥಾಪಿಸಿ, ಆ ಜಿನಮೂರ್ತಿಗಳ ಪೂಜೆಯನ್ನು ನಿರ್ದೇಶಿಸಿದರೋ, ಆ ಉದ್ದೇಶವು ಆಗ ಸಫಲವಾದಂತಾಯಿತು. ಸಮಾಜದಲ್ಲಿ ಯಾವ ಯಾವ ದುಷ್ಪರಿಣಾಮಗಳು ಕೂಡಿಕೊಂಡು ಬಂದು ಮನುಷ್ಯನ ಜೀವನವು ಪಾವನವಾಗದಂತೆ, ಸುಂದರವಾಗದಂತೆ, ಸತ್ಯಮಯವಾಗದಂತೆ ಮಾರ್ಪಡಿಸುವವೋ ಆ ದುಷ್ಪರಿಣಾಮಗಳು ಬಂಧುಗಳ ಕೂಡುವಿಕೆಯಿಂದ, ಸ್ನೇಹಿತರ ಸಮಾಗಮದಿಂದ ದೂರವಾಗಿ, ದೇವರ ಮುಂದೆ ಎಲ್ಲರ ವಿಶ್ವಕುಟುಂಬತ್ವವು ಉಂಟಾದಂತಾಯಿತು.

# ನೋಂಪಿ ಪೂಜೆಗಳ ಮಹತ್ತ್ವ

ಮಾನವನಲ್ಲಿ ದೇವತ್ವದ ಪರಮಶಕ್ತಿಯೊಂದು ಗುಪ್ತವಾಗಿ ಅಡಗಿದ್ದು, ಜನ್ಮದಾರಭ್ಯ ಸ್ಥಿತಿಗತಿಗಳಿಗನುಕೂಲವಾಗಿ ವಿಕಾಸ ಹೊಂದುತ್ತ ಬರುವುದು. ಆ ಶಕ್ತಿಯು ಸಂಪೂರ್ಣವಾಗಿ ವಿಕಾಸವಾಗುವುದಾದರೆ, ಆ ಮನುಷ್ಯನು ಪಾವನನಾಗಿ ಪರಮಾತ್ಮನಾಗುವನು. ನಮ್ಮ ಅಂತರಂಗದ ದಿವ್ಯಶಕ್ತಿಯು ವಿಕಾಸ ಹೊಂದಿ, ಅದರ ಅರಿವು ನಮಗೆ ಉಂಟಾಗಿ ಆತ್ಮಕಲ್ಯಾಣವನ್ನು ನಾವು ಸಾಧಿಸಬೇಕಾದರೆ, ಅಂತರಂಗದ ಪರಿಶುದ್ಧತೆಯು ಅಗತ್ಯವಾಗಿ ಆಗಬೇಕಾಗಿದೆ. ಈ ಪರಿಶುದ್ಧತೆಯನ್ನು ನಮ್ಮ ಜೀವನವನ್ನು ಪರಿಶುದ್ಧವನ್ನಾಗಿ ಇಟ್ಟುಕೊಳ್ಳುವುದರಿಂದ ಮುಖ್ಯವಾಗಿ ಪಡೆಯಬೇಕಾಗಿದೆ. ಆ ತರಹದ ಪ್ರಯತ್ನದೊಡನೆ, ಹಿಂದಿನ ಕಾಲದಲ್ಲಿ, ಆತ್ಮಕಲ್ಯಾಣವನ್ನು ಸಾಧಿಸಿ ಪಡೆದು ಧನ್ಯರಾದ ಪೂಜ್ಯ ತೀರ್ಥಂಕರರನ್ನು ನಮ್ರಭಾವದಿಂದ ಭಕ್ತಿಪೂರ್ವಕವಾಗಿ ಅರ್ಚಿಸುವುದು ಅತ್ಯಾವಶ್ಯಕವಾಗಿದೆ. ಏಕೆಂದರೆ, ಹಿರಿಯರು ನಡೆದ ಮಾರ್ಗವು ಅನುಭವಪೂರ್ಣವಾಗಿ ಸುಲಭವಾಗಿದ್ದು, ಅದರ ಏರುತಗ್ಗುಗಳು ಗೊತ್ತಾಗಿ ಸುಗಮವಾಗಿರುತ್ತದೆ. ಜೀವನದ ಗುರಿಯು ಪೂರ್ವಿಕರಿಗೂ ಆಧುನಿಕರಿಗೂ ಒಂದೇ ಆದುದರಿಂದ, ಹಿರಿಯರು ನಡೆದು ಬಂದ ಮಾರ್ಗದಲ್ಲಿಯೇ ವಿಶ್ವಾಸದಿಂದ ಮುನ್ನಡೆಯುವುದು ಶ್ರೇಯಸ್ಕರವಾಗಿದೆ.

ನಮ್ಮ ಪೂರ್ವಾಚಾರ್ಯರು ಭಕ್ತಿಭಾವವನ್ನು ಪ್ರದರ್ಶಿಸಲು ಅನುಕೂಲತೆಗಳನ್ನು ಒದಗಿಸುವುದಕ್ಕಾಗಿ ಅನೇಕ ನೋಂಪಿ ಪೂಜೆಗಳ ಕ್ರಮಗಳನ್ನು ಉಪದೇಶಿಸಿರುತ್ತಾರೆ. ಈ ಪೂಜಾಕ್ರಮಗಳು ಆತ್ಮನ ಉನ್ನತಿಗೆ ಸಾಧಕವಾಗಿವೆ. ನೋಂಪಿ ಪೂಜೆಗಳಲ್ಲಿ ಸಂಯಮ ಜೀವನವೂ ತ್ಯಾಗಬುದ್ಧಿಯೂ ಉಂಟಾಗುತ್ತದೆ. ಸಂಯಮ ಜೀವನದಿಂದ ಮಾನವನ ಜೀವನಕ್ಕೊಂದು ಹೊಳಪು ಉಂಟಾಗುವುದು. ದೇವರಲ್ಲಿ ಭಕ್ತಿ-ಶ್ರದ್ಧೆಯನ್ನಿಟ್ಟು ನೋಂಪಿಪೂಜೆಗಳನ್ನು ಮಾಡುತ್ತಿರುವುದರಿಂದ ಒಂದು ರೀತಿಯ

ಅಲೌಕಿಕ ಆನಂದವು ಉಂಟಾಗುವುದು. ನೋಂಪಿಗಳನ್ನು ಆಚರಿಸುವಾಗ ತಾನು ನಿಯಮದಲ್ಲಿದ್ದು ವ್ರತನಿಯಮವನ್ನು ಪಾಲಿಸಬೇಕಾದ ಕಾರಣ ತನ್ನ ಇಂದ್ರಿಯಸಂಯಮವನ್ನು ಮಾಡಿಕೊಳ್ಳಬೇಕಾಗುತ್ತದೆ. ಉತ್ತಮವಾದ ಫಲಪುಷ್ಪಾದಿ ಪೂಜಾದ್ರವ್ಯಗಳಿಗೆ ತಾನು ತನ್ನ ಹಣವನ್ನು ವಿನಿಯೋಗಿಸಿ ತ್ಯಾಗಬುದ್ಧಿಯನ್ನು ಗಳಿಸುವಂತಾಗುತ್ತದೆ. ನೋಂಪಿಗಳು ಆತ್ಮಕಲ್ಯಾಣವನ್ನು ಮಾತ್ರವಲ್ಲ, ಕುಟುಂಬಕ್ಕೆ ಶ್ರೇಯಸ್ಸನ್ನೂ ತರುತ್ತವೆ. ಮುಂದಿನ ಸದ್ಗತಿಗೆ ಹಾದಿಯನ್ನು ಮಾಡಿಕೊಡುತ್ತವೆ. ಹೀಗೆ ಜೀವನ ಸಾಗರದಲ್ಲಿ ತೇಲುವ ಮನುಷ್ಯನಿಗೆ ಭಕ್ತಿ-ಶ್ರದ್ಧೆಯಿಂದ ಕಟ್ಟಲ್ಪಟ್ಟ ನೋಂಪಿ ಪೂಜೆಗಳು ಪಾರುಮಾಡತಕ್ಕ ನಾವೆಗಳಾಗಿವೆ. ಸಂಸಾರಬಂಧನದಿಂದ ಮುಕ್ತರನ್ನಾಗಿ ಮಾಡುವ ದ್ವಾರಗಳೇ ಈ ನೋಂಪಿ ಪೂಜೆಗಳಾಗಿವೆ.

ಈ ನೋಂಪಿ ಪೂಜೆಗಳನ್ನು ಆಚರಿಸಿ ಭಕ್ತಿಭಾವವನ್ನು ಪ್ರದರ್ಶಿಸುವುದಕ್ಕೆ ಸುಲಭವಾಗಲು ನಮ್ಮ ಪೂರ್ವಾಚಾರ್ಯರು ನಾನಾ ನೋಂಪಿ ಪೂಜೆಗಳ ಕ್ರಮಗಳನ್ನು ಉಪದೇಶಿಸಿರುತ್ತಾರೆ. ಆಚರಿಸುವುದಕ್ಕೆ ಅನುಕೂಲವಾದ ಚಾತುರ್ಮಾಸವನ್ನು ಕಲ್ಪಿಸಿ ಜಿನಮಂದಿರಗಳನ್ನು ಕಟ್ಟಿಸಿ ಆತ್ಮನ ಉನ್ನತಿಯ ಸಾಧನೆಗೆ ಮಾರ್ಗವನ್ನು ತೋರಿಸಿ ಕೊಟ್ಟಿರುತ್ತಾರೆ. ಈ ಚಾತುರ್ಮಾಸದಲ್ಲಿ ಜಲವೃಷ್ಟಿಯ ಮೂಲಕ ತ್ರಸ ಸ್ಥಾವರ ಪ್ರಾಣಿಗಳ ಉತ್ಪತ್ತಿಯು ಬಹಳವಾಗಿ ಆಗುವುದರಿಂದ, ಸಂಪತ್ತು ವರ್ಧಿಸಿ ಬರುವಾಗ ಮುನಿಗಳು ವ್ರತಿಗಳು ಒಂದು ನಿಶ್ಚಿತ ಸ್ಥಾನದಲ್ಲಿ ಚಾತುರ್ಮಾಸವನ್ನು ಮಾಡುತ್ತ ಅನೇಕ ವ್ರತ, ಉಪವಾಸ, ಧ್ಯಾನ, ಸ್ವಾಧ್ಯಾಯಗಳ ಮೂಲಕ ಧರ್ಮಸಾಧನೆಯನ್ನು ಮಾಡಿ ಜನ್ಮಸಾಫಲ್ಯವನ್ನು ಮಾಡುತ್ತಾರೆ. ಪ್ರಾಪಂಚಿಕ ಜಂಜಾಟದಲ್ಲಿ ಸಿಕ್ಕಿರುವ ಗೃಹಸ್ಥನು ಈ ಕಾಲದಲ್ಲಿ ಹೆಚ್ಚಿನ ಉದ್ಯೋಗವಿಲ್ಲದಿರುವುದರಿಂದ ಶಕ್ತಿಗನುಸಾರ ಯಾವುದಾದರೊಂದು ನೋಂಪಿ ಪೂಜೆ ನಿಯಮಗಳನ್ನು ಆಚರಿಸತಕ್ಕದ್ದು.

ಹಿಂದಿನ ಧರ್ಮಾತ್ಮರಾದ ಮಹನೀಯರು ಜನ್ಮಸಾಫಲ್ಯವನ್ನು ಮಾಡಿಕೊಂಡು ಪಾವನರಾದರು. ಆದರೆ ಕಾಲದೋಷದಿಂದ ಇತ್ತೀಚೆಗೆ ನೋಂಪಿ ಪೂಜೆಗಳಲ್ಲಿ ಜನರಿಗೆ ಶ್ರದ್ಧಾಭಕ್ತಿಯು ಕಡಮೆಯಾಗುತ್ತಿದೆ.

ಜನರು ಅದೊಂದು ಕಷ್ಟತರವಾದ ಧರ್ಮಸಾಧನವೆಂದು ತಿಳಿಯುತ್ತಾರೆ. ಆದರೆ, ಹೀಗೆ ತಿಳಿಯುವುದಕ್ಕೆ ಜನರಿಗೆ ತಮ್ಮ ಜೀವನದ ಗುರಿ ಯಾವುದೆಂದು ಮರೆತು ಹೋದುದೇ ತಿಳಿಯದೆ ಇದ್ದುದೇ ಕಾರಣವಾಗಿರುತ್ತದೆ. ತನ್ನ ಜೀವನದ ಉದ್ದೇಶವೇನೆಂಬುದನ್ನು ಪ್ರತಿಯೊಬ್ಬನು ವಿಚಾರಿಸಿ ಮನನ ಮಾಡಿಕೊಂಡರೆ, ಈ ಜೀವನವು ಕ್ಷಣಿಕವಾದುದು, ಈ ಜೀವನದ ಗುರಿಯು ಆತ್ಮಕಲ್ಯಾಣವಾಗಿದೆ ಎಂದು ತಿಳಿದುಕೊಂಡರೆ, ಪ್ರತಿಯೊಬ್ಬನ ಮನಸ್ಸು ಧರ್ಮಮಾರ್ಗದ ಕಡೆಗೆ ಭಕ್ತಿಯ ಒಸರುಗಳಲ್ಲಿ ತೇಲಿ, ತೀರ್ಥಂಕರರೆಂಬ ನದೀನದಗಳಲ್ಲಿ ಹರಿದು ಮೋಕ್ಷಸಾಗರದಲ್ಲಿ ಸೇರುವುದು.

---

# ಚಾತುರ್ಮಾಸ

ಚಾತುರ್ಮಾಸವು ಆಷಾಢ ಶುದ್ಧ ಅಷ್ಟಮಿಯಿಂದ ಕಾರ್ತಿಕ ಶುದ್ಧ ಪೂರ್ಣಿಮಾ ತನಕ ಹಬ್ಬಿರುತ್ತದೆ. ಈ ಅವಧಿಯೇ ಪೂರ್ವಕಾಲದಿಂದಲೂ ಧರ್ಮಪ್ರಭಾವನೆಯ ಪುಣ್ಯಕರ್ಮಕ್ಕೆ ಅನುಕೂಲವಾದ ಸಮಯವಾಗಿರುತ್ತದೆ. ಈ ಕಾಲದಲ್ಲಿಯೇ ನಮ್ಮ ವ್ರತಗಳೆಲ್ಲ ನಡೆದುಬರುವವು. ಈ ಕಾಲವೇ ವಿಶೇಷ ಧರ್ಮಸಾಧನೆಗೆ ಯೋಗ್ಯವಾಗಿರುತ್ತದೆ. ಅಷ್ಟಾಹ್ನಿಕ, ಶ್ರಾವಣ ಪೂರ್ಣಿಮಾ, ರಕ್ಷಾಬಂಧನ, ದಶಲಕ್ಷಣ, ಷೋಡಶ ಭಾವನೆ, ಅನಂತನವ್ರತ, ಮೊದಲಾದ ನಮ್ಮ ವ್ರತಾರಾಧನೆಗಳೆಲ್ಲ ಈ ಕಾಲದಲ್ಲಿಯೇ ಕೂಡಿಬರುತ್ತಿವೆ. ಆತ್ಮಕಲ್ಯಾಣದ ಸಾಧನೆಗೆ ಚಾತುರ್ಮಾಸವು ತಕ್ಕ ಸಮಯವಾಗಿರುತ್ತದೆ.

ಚಾತುರ್ಮಾಸವು ಮಳೆಗಾಲದಲ್ಲಿ ಪ್ರಾರಂಭವಾಗಿ, ಚಳಿಬರುವ ಸಮಯದಲ್ಲಿ ಅಂತ್ಯವಾಗುತ್ತದೆ. ಮಳೆಗಾಲವು ಕೃಷಿಕರಿಗೆ, ವ್ಯಾಪಾರಿಗಳಿಗೆ ಬಿಡುವಿನ ಸಮಯ. ಕೃಷಿಯ ಕೆಲಸವು ಮುಗಿದು, ಪೈರು ಪಚ್ಚೆಯು ದಿನೇ ದಿನೇ ಬೆಳೆಯುವ ಸಮಯವದು. ಬೆಳೆಯುತ್ತಿರುವ ಪೈರುಪಚ್ಚೆಯಿಂದ ಸೃಷ್ಟಿಯು ಅಧಿಕಾಧಿಕವಾಗಿ ಮನೋರಂಜಕವಾಗುವ ಸಮಯವದು. ಬೆಳೆಯುತ್ತಿರುವ ಸಸ್ಯಶಾದ್ವಲವು ಹೂಬಿಟ್ಟು ಫಲವನ್ನು ಹೊತ್ತುಕೊಳ್ಳುವ ಸಮಯವದು. ಅಂತೆಯೇ ನಾಳಿನ ದಿವಸವ ಸುಖಸಂಪತ್ತಿನ ಸಾಮ್ರಾಜ್ಯವನ್ನು ಆಶಿಸುತ್ತಿರುವ ವ್ಯಾಪಾರಿಗಳ ಕಲ್ಪನೆಯ ಸಮಯವೂ ಅದೇ ಆಗಿರುವುದು. ಬೆಳೆಯುತ್ತಿರುವ ಪೈರುಪಚ್ಚೆ ಕೈಗೆ ಬಂದು ಫಲದಾಯಕವಾದರೆ, ವ್ಯಾಪಾರ ಸಾಗಿ, ಜನರಿಗೆ ಪ್ರಯೋಜನವಾಗಿ, ದೇಶವು ಸಂಪತ್‌ಸಮೃದ್ಧವಾಗುವುದು. ಹೀಗೆ ಚಾತುರ್ಮಾಸವು ನಾವು ಕಷ್ಟಪಟ್ಟು ದುಡಿದುದರ ಫಲ ಬರುವ ಸಮಯವೂ ಆ ಫಲವು ಕೈಗೆ ಬಂದು ದೇಶಕ್ಕೆಲ್ಲ ಸಂಪದ್ವಿನಿಮಯವಾಗುವ ಸಮಯವೂ ಆಗಿರುತ್ತದೆ. ಹೀಗೆ ಚಾತುರ್ಮಾಸದಲ್ಲಿ ಸಂಪತ್‌ಸಿದ್ಧತೆಯೂ ಸಂಪತ್ ವಿನಿಮಯದ ಪೂರ್ವಸಿದ್ಧತೆಯೂ ನಡೆಯುತ್ತಿವೆ.

ಆದರೆ, ಕೃಷಿರೂಪವಾಗಿ ಸಂಪತ್‌ಸಿದ್ಧತೆ ಆಗುವಾಗಲೂ ವ್ಯಾಪಾರರೂಪವಾಗಿ ಸಂಪತ್‌ವಿನಿಮಯದ ಪೂರ್ವರಂಗವು ಕಟ್ಟಲ್ಪಡುವಾಗಲೂ ತುಂಬ ಬಿಡುವು ನಮಗೆಲ್ಲರಿಗೂ ಇದ್ದೇ ಇರುತ್ತದೆ. ಇದು ಮಳೆಗಾಲ. ಬೆಳೆಯುವ ಪೈರಿಗೆ ಸೃಷ್ಟಿಯೇ ಆಧಾರ; ಸೃಷ್ಟಿಯೇ ಸಾಹಾಯ್ಯ. ಮನುಷ್ಯ ಪ್ರಯತ್ನಕ್ಕೆ ಆಗ ವಿರಾಮ. ಸಿದ್ಧವಾಗುವ ಧಾನ್ಯಸಂಪತ್ತಿಗೆ ಮಾರ್ಗದ ಸೌಕರ್ಯಗಳು ಇಲ್ಲದೆ, ಆ ಸಂಪತ್ತು ಸಿದ್ಧವಾಗಿಯೂ ಇಲ್ಲದೆ, ವ್ಯಾಪಾರಕ್ಕೆ ಆಗ ವಿರಾಮ. ಹೀಗೆ ಸಂಪತ್ತು ಬೆಳೆದು, ಸಂಪತ್ತು ವಿನಿಮಯವಾಗುವ ಈ ಹೊತ್ತಿನ ಸಮಯ ಮನುಷ್ಯನಿಗೆ ವಿರಾಮ ಸಿಕ್ಕಿದುದು ಅತೀವ ಚೋದ್ಯವಾಗಿರುತ್ತದೆ. ಆ ವಿರಾಮದ ಸಮಯವನ್ನು ಮನುಷ್ಯನು ಸದುಪಯೋಗ ಮಾಡಿಕೊಳ್ಳುವುದು ಕರ್ತವ್ಯವಾಗಿರುತ್ತದೆ.

ಸಂಪತ್ತು ಪ್ರತಿವರ್ಷವೂ ಸೃಷ್ಟಿಯಾಗುತ್ತಿದೆ. ಸಂಪತ್ತು ಪ್ರತಿವರ್ಷವೂ ದೇಶದಲ್ಲೆಲ್ಲಾ ವಿನಿಮಯವಾಗುತ್ತಿದೆ. ಈ ಸಂಪತ್ತಿನ ಸ್ವರೂಪವಾವುದು? ಪ್ರಯೋಜನವಾವುದು? ಮತ್ತು ಉದ್ದೇಶವಾವುದು? ಎಂಬುದರ ಕಡೆಗೆ ಈ ಸಮಯದಲ್ಲಿಯೇ ಪ್ರತಿಯೊಬ್ಬನ ದೃಷ್ಟಿಯು ತಿರುಗಬೇಕಾಗಿದೆ. ಸಂಪತ್ತು ಬರುವ ಮುಂಚೆಯೇ, ಒಂದಿಷ್ಟು ವಿಚಾರ ಮಾಡಿದರೆ, ಆ ಸಂಪತ್ತು ಸತ್ಪ್ರಯೋಜನಕ್ಕೆ ಪಾತ್ರವಾಗಬಹುದು. ಈ ಸಮಯದಲ್ಲಿ ಮನುಷ್ಯನ ಮನಸ್ಸು ಆತ್ಮನ ಕಡೆಗೆ ತಿರುಗಿಸಲ್ಪಟ್ಟರೆ, ಆ ಸಂಪತ್ತು ದುಷ್ಪ್ರಯೋಜನಕ್ಕೆ ಬೀಳುವುದು ನಂಬಲು ಅಸಾಧ್ಯವಾದ ಸಂಗತಿಯಾಗಬಹುದು. ಭಾವೀ ಸಂಪತ್ತಿನ ಸಾಮ್ರಾಜ್ಯಕ್ಕೆ ಅಧಿಪತಿಯಾಗುವ ಮುಂಚೆ, ಆ ಸಾಮ್ರಾಜ್ಯದ ಆಧಿಪತ್ಯಕ್ಕೆ ಸಿದ್ಧತೆಗಳನ್ನೆಲ್ಲ ಮುಗಿಸಿದ ಆಚೆ ಆತ್ಮಶುದ್ಧಿಯನ್ನು ಮಾಡಿಕೊಳ್ಳುವುದು, ಆತ್ಮಕಲ್ಯಾಣವನ್ನು ಮಾಡಿಕೊಳ್ಳುವುದು, ಶ್ರೇಯಸ್ಕರವಲ್ಲವೆ? ಈ ದೃಷ್ಟಿಯಿಂದ ಪೂರ್ವಿಕರು ಈ ಕಾಲದಲ್ಲಿಯೇ ಈ ವ್ರತಾದಿಗಳ ನಿಯಮಗಳನ್ನಿಟ್ಟು, ಆತ್ಮಶುದ್ಧಿಗೆ ಅನುಕೂಲತೆಗಳನ್ನು ಮಾಡಿ ಕೊಟ್ಟಿರುವರು. ಸಂಪತ್ ಪ್ರಾಪ್ತಿಯ ಮೊದಲು ಆತ್ಮಶುದ್ಧಿ; ಆತ್ಮಶುದ್ಧಿಗೆ ಅನುಕೂಲವಾಗಿ ವಿರಾಮ, ಆ ವಿರಾಮಕ್ಕೆ ಉತ್ತೇಜಕವಾಗಿ, ಬೆಳೆಯುತ್ತಿರುವ

ಸೃಷ್ಟಿಯ ಮನೋರಂಜಕ ಸೌಂದರ್ಯ.—ಹೀಗಿರುತ್ತಿದ್ದು ಚಾತುರ್ಮಾಸವು ಅತ್ಯಂತ ಪವಿತ್ರವಾದ ಕಾಲವಾಗಿರುತ್ತದೆ. ಆ ಚಾತುರ್ಮಾಸದ ಪ್ರಯೋಜನವನ್ನು ನಾವೆಲ್ಲರೂ ಮಾಡಿಕೊಳ್ಳುವುದು ಧರ್ಮವಾಗಿದೆ. ಸಂಪತ್ಕಾರಕವಾದ ಚಾತುರ್ಮಾಸವು, ಸಂಪತ್ ಯೋಗ್ಯತೆಯ ಸಿದ್ಧತೆಗೂ ಅನುಕೂಲವಾಗಿರುತ್ತದೆ. ಆ ಸಂಪತ್ ಯೋಗ್ಯತೆ ಎಲ್ಲರಿಗೂ ಪ್ರಾಪ್ತವಾಗಲಿ.

---

# ಧರ್ಮಪ್ರಭಾವನೆ

ಮನುಷ್ಯನ ಆತ್ಮೋನ್ನತಿಗೆ ಧರ್ಮವೇ ಮೂಲವಾಗಿದೆ. ಈ ಧರ್ಮವಾದರೋ, ವಿವೇಕಪೂರ್ಣ ತತ್ತ್ವಾಲೋಚನೆಯ ಅನುಭವದಿಂದ ರೂಪುಗೊಂಡು ಸತ್ಯಾಸತ್ಯ, ಪಾಪಪುಣ್ಯ ಇವುಗಳ ಭಿನ್ನತೆಯನ್ನು ತೋರಿಸಿಕೊಡುತ್ತದೆ. ಲೋಕದ ಇತರ ಪ್ರಾಣಿಗಳಿಗಿಂತ ಮನುಷ್ಯನು ಶ್ರೇಷ್ಠನೆಂದೆಣಿಸಿಕೊಳ್ಳುವುದು ಮುಖ್ಯವಾಗಿ ಅವನಲ್ಲಿರುವ ವಿವೇಕದಿಂದಾಗಿರುತ್ತದೆ. ಈ ವಿವೇಕದ ಮುಖ್ಯ ಗುಣವಾದರೋ ಆತ್ಮೋನ್ನತಿಯಾಗಿರುತ್ತದೆ. ಮನುಷ್ಯನಾಗಿ ಹುಟ್ಟಿದವನು ತನ್ನ ವಿವೇಕದ ಸದುಪಯೋಗಪಡಿಸಿ, ತನ್ನ ಆತ್ಮಕಲ್ಯಾಣವನ್ನು ಮಾಡಿಕೊಳ್ಳದಿದ್ದಪಕ್ಷದಲ್ಲಿ ಜೀವನದ ಉದ್ದೇಶವು ನಿಷ್ಫಲವಾದಂತೆಯೇ ಸರಿ. ಆದುದರಿಂದ ವಿವೇಕಪೂರ್ಣವಾದ ಧರ್ಮಜ್ಞಾನವಾಗಬೇಕು. ಧರ್ಮಜ್ಞಾನದಿಂದ ಆತ್ಮಕಲ್ಯಾಣವಾಗಬೇಕು.

ಧರ್ಮಪಾವನವಾದ ಜೀವನದಿಂದ ಒಂದು ಜನಾಂಗವಾಗಲಿ, ವ್ಯಕ್ತಿಯಾಗಲಿ ಹಾಳಾಗುವುದಿಲ್ಲ. "ಧರ್ಮ ಧರ್ಮ"ವೆಂದು ಭಾರತೀಯರು ಕೆಟ್ಟರು, ಎಂಬ ಮಾತಿನಲ್ಲಿ ತಥ್ಯಾಂಶವಿಲ್ಲ. ಭಾರತೀಯರು ಇಂದು ಅಧೋಗತಿಗೆ ಬಂದಿಳಿದಿದ್ದ ಪಕ್ಷಕ್ಕೆ, ಅದು ಕೇವಲ ಧರ್ಮಬುದ್ಧಿಯಿಂದ ಆದುದೆಂದು ನಿಶ್ಚಯವಾಗಿ ಹೇಳಲಾಗುವುದಿಲ್ಲ. ಸತ್ಕರ್ಮಕ್ಕೆ ಅಳಿಗಾಲವಿಲ್ಲವೆಂಬುದು ಕಟ್ಟಿಟ್ಟ ಮಾತು. ಸತ್ಕರ್ಮಕ್ಕೆ ಒಂದು ಕಾಲದಲ್ಲಿ ಧರ್ಮಸಂಕಟವು ಒದಗುವುದಾದರೆ, ಬೇರೆ ಬೇರೆ ಕಾರಣಗಳಿಂದ ಕೂಡಿಕೊಂಡು ಬಂದ ವಿಧ್ವಮೂಸಗಳೇ ಕಾರಣವಾಗುತ್ತವೆ. ಅಂತಹ ವಿಧ್ವಮೂಸಗಳು, ಸೂರ್ಯನನ್ನು ಮರೆಮಾಡುವ ಮೋಡಗಳಂತೆ, ಕ್ಷಣಿಕವಾದವುಗಳು ಆಗಿರುತ್ತವೆ. ಯಾವ ಆಪತ್ತು ಬಂದರೂ, ಅದನ್ನು ದಾಟಿ ಬರುವ ವಸ್ತು ಸತ್ಯಜ್ಞಾನವಾಗಿರುತ್ತದಲ್ಲದೆ, ಮಿಥ್ಯಾಜ್ಞಾನವಾಗಿರಲಿಕ್ಕಿಲ್ಲ. ಧರ್ಮಕ್ಕೆ ಮುತ್ತಿ ಬಂದ ಮೋಡಗಳು ಒಂದೆರಡಲ್ಲ. ಆದರೆ ಆ ಧರ್ಮವು ನಿಚ್ಚಳವಾಗಿ ಇಂದಿಗೂ ಪ್ರಜ್ವಲಿಸಿರುತ್ತದೆ.

ಹಾಗೆಂದು ಧರ್ಮವನ್ನು ತೊರೆದು, ಲೌಕಿಕ ಉನ್ನತಿಯನ್ನೆ ತಮ್ಮ ಜೀವನದ ಧ್ಯೇಯವನ್ನಾಗಿಟ್ಟ ಜನರು ಸಂತೃಪ್ತ ಜೀವನವನ್ನು ಸಾಗಿಸಿದಂತೆ ಕಾಣುವುದಿಲ್ಲ. ಅಂತಹ ಜನಾಂಗಗಳು ಇಂದಿನ ದಿವಸ ಯಾವ ಪರಮಾವಧಿಗೆ ಬಂದು ಮುಟ್ಟಿವೆ, ಅವುಗಳ ಉತ್ತರೋತ್ತರ ಅಭಿವೃದ್ಧಿಯು ಹೇಗೆ ಬೇರು ಸಹಿತ ನಿರ್ನಾಮವಾಗುತ್ತಿದೆ, ಎಂಬುದನ್ನು ನಾವು ಈಗ ಕಣ್ಣಾರೆ ಕಾಣುತ್ತಿರಬಹುದು. ಆದುದರಿಂದ ಒಬ್ಬ ವ್ಯಕ್ತಿಯಾಗಲಿ, ಒಂದು ಜನಾಂಗವಾಗಲಿ, ಧರ್ಮದ ಕಾರಣದಿಂದ ಹಾಳಾಗಿ ಹೋಯಿತು ಎಂದು ಹೇಳಲಿಕ್ಕಾಗುವುದಿಲ್ಲ. ಜೀವನದ ಗುರಿತಪ್ಪಿ, ಅವಸಾನವು ಪ್ರಾಪ್ತವಾಗುತ್ತದೆ. ಜೀವನದ ಆಧಾರ ತಪ್ಪಿ, ಅಧಃಪತನವು ಉಂಟಾಗುತ್ತದೆ. ಧರ್ಮವು ಆಧಾರ; ಆತ್ಮೋನ್ನತಿಯು ಗುರಿ.

ಈ ಧರ್ಮವೆಂಬುದು ಪ್ರತಿಯೊಬ್ಬನ ಪ್ರತ್ಯಕ್ಷಕ್ಕೆ ಅವಶ್ಯಂಭಾವಿಯಾಗಿ ಗೋಚರಿಸುವಂತಹುದಲ್ಲ. ಆದುದರಿಂದ ಅದರ ಪ್ರಭಾವನೆಯು ಆಗಬೇಕಾಗಿದೆ. ಸುಷಮ ಸುಷಮ ಕಾಲದನಂತರದಿಂದ ಮನುಷ್ಯನ ಜೀವನವು ಹಾಳಾಗುತ್ತ ಬರುತ್ತಿದ್ದಾಗ, ಈ ಧರ್ಮದ ಪ್ರಭಾವನೆಯು ಹೆಚ್ಚು ಹೆಚ್ಚು ನಡೆಯಬೇಕಾಗುತ್ತಿದೆ. ಜಗತ್ತು ಅಜ್ಞಾನದಿಂದ ತುಂಬಿದೆ. ಅಜ್ಞಾನಾಂಧಕಾರವು ಹೆಚ್ಚು ಹೆಚ್ಚಾಗಿ ಕವಿದು ಬರುತ್ತದೆಂದು ನಾವೇನೂ ನಿರಾಶರಾಗಬೇಕೆಂತಿಲ್ಲ. ಹಾಗೆ ಅಜ್ಞಾನಾಂಧಕಾರವು ಹೆಚ್ಚುತ್ತಿರುವ ಕಾಲದಲ್ಲಿ ವಿವೇಕಿಗಳಿಗೆ ಆದಷ್ಟು ಪವಿತ್ರವಾದ ಜೀವನವನ್ನು ನಡೆಸಲು ಪ್ರಯತ್ನ ಮಾಡುವುದು ಕರ್ತವ್ಯವಾಗುತ್ತದೆ; ಆದಷ್ಟು ಅಹಿಂಸಾಪೂರ್ಣವಾದ ಕರ್ಮವನ್ನು ಮಾಡಿಕೊಳ್ಳುವುದು ಧರ್ಮವಾಗುತ್ತದೆ: ಆದಷ್ಟು ಧರ್ಮಪ್ರಭಾವನೆಯು ಜನರಲ್ಲೆಲ್ಲಾ ಉಂಟಾಗಿ, ಲೋಕದಲ್ಲಿ ಧರ್ಮಸಂಕಟವು ಕಡಿಮೆಯಾಗಿ, ಜೀವನವು ಸುಲಭವಾಗುವಂತೆ ಮಾಡುವುದು ಧ್ಯೇಯವಾಗಿರುತ್ತದೆ.

ಧರ್ಮಪ್ರೇಮವು ಪ್ರತಿಯೊಬ್ಬನಲ್ಲಿ ನೆಲೆಗೊಳ್ಳಬೇಕಾದರೆ, ಅದು ಚಿಕ್ಕಂದಿನಲ್ಲಿಯೇ ಪ್ರಾರಂಭವಾಗಬೇಕು. ಆದರೆ ನಮ್ಮ ಚಿಕ್ಕವರು ಧರ್ಮಪ್ರಭಾವನೆಯು ಸದ್ವರ್ಚಸ್ಸಿನ ಒಳಗೆ ಬಾರದಿರುವುದು ವಿಷಾದಕರ

ವಾಗಿದೆ. ಉತ್ತರ ದೇಶದ ಜೈನರಿಗೂ ದಕ್ಷಿಣ ದೇಶದ ಜೈನರಿಗೂ ಇದೇ ಭೇದವಾಗಿರುತ್ತದೆ. ಧರ್ಮವೆಂದರೇನು? ದೇವರೆಂದರೇನು? ದೇವರ ಗುಣಗಳೇನು? ಮಾನವ ಜೀವನದ ಮುಖ್ಯ ಧ್ಯೇಯವೇನು? ಇತ್ಯಾದಿ ವಿಷಯಗಳಲ್ಲಿ ಒಂದು ರೀತಿಯ ಜಿಜ್ಞಾಸೆಯು ಸಣ್ಣ ಮಕ್ಕಳ ಹೃದಯ ಕ್ಷೇತ್ರದಲ್ಲಿ ಬೇರೂರದೆ ಹೋದರೆ, ಮತ್ತೆ ಅಲ್ಲಿ ವೃಕ್ಷವಾದರೂ ಬೆಳೆಯು ವುದು ಹೇಗೆ? ಮಳೆಗಾಲ ದಾಟಿ, ಕ್ಷೇತ್ರವು ಗಟ್ಟಿಯಾದನಂತರ ಬೀಜ ವನ್ನು ಬಿತ್ತುವುದಾದರೂ ಹೇಗೆ? ಹೀಗಾಗಿ ಏನಾದರೂ ಧರ್ಮಪ್ರಭಾವ ನೆಯು ಎಲ್ಲಿಯಾದರೂ ನಡೆಯುವುದಾದರೂ ಅದರ ಪ್ರಯೋಜನವನ್ನು ಗ್ರಹಿಸುವುದಕ್ಕೆ ತಕ್ಕ ಪಾತ್ರಗಳೂ ಕಾಣುವುದಿಲ್ಲ. ನಮ್ಮಲ್ಲಿ ಧರ್ಮ ಪ್ರೇಮವು ರೂಢಮೂಲವಾಗಿಲ್ಲ.

ಹಿಂದೆ, ಧರ್ಮಪ್ರಭಾವನೆಯನ್ನು ಮಾಡಿ, ಪರರಿಗೆ ಆತ್ಮೋನ್ನತಿ ಯನ್ನು ಸಾಧಿಸಲಿಕ್ಕೆ ಸಹಾಯ ಮಾಡಿ, ತಾವೂ ಆತ್ಮೋನ್ನತಿಯನ್ನು ಪಡೆದ ಮಹಾತ್ಮರು ಹಲವರಿದ್ದರು; ಅದನ್ನೇ ತಮ್ಮ ದೀಕ್ಷೆಯನ್ನಾಗಿಟ್ಟು ಕೊಂಡು, ತ್ಯಾಗಧರ್ಮದ ನಿಯಮಗಳನ್ನು ಪಾಲಿಸುತ್ತ, ಭಕ್ತಿ ಜ್ಞಾನ ವೈರಾಗ್ಯಗಳ ಮೂರ್ತಿಗಳಾಗಿ ಸ್ವಪರಹಿತಕ್ಕಾಗಿ ಹಳ್ಳಿ ಹಳ್ಳಿಗಳಲ್ಲಿ ತಿರು ಗಾಡಿ ಗೃಹಸ್ಥರಿಗೆ ಧರ್ಮದ ಮಹತ್ತ್ವವನ್ನು ಚೆನ್ನಾಗಿ ತಿಳಿಸುತ್ತ, ಧರ್ಮ ಪ್ರಚಾರವನ್ನು ಸಾಗಿಸುತ್ತಿದ್ದರು. ಶ್ರಾವಕ ಶ್ರಾವಿಕೆಯರು ಅವರಿಂದ ಅನೇಕ ವ್ರತ ನಿಯಮಗಳನ್ನು ತೆಗೆದುಕೊಂಡು ಅಂತಹವರ ಪಾದ ಸ್ಪರ್ಶ ದಿಂದ ತಮ್ಮ ಗೃಹಗಳು ಪವಿತ್ರವಾಯಿತೆಂದು ಭಾವಿಸುತ್ತಿದ್ದರು. ಅವ ರಿಂದ ಧರ್ಮಪ್ರಭಾವನೆಯ ಕಾರ್ಯಗಳು ಸರ್ವತ್ರ ಪ್ರಚಾರವಾಗು ತ್ತಿದ್ದುವು.

ಆದರೆ, ಈಗೀಗ ಅಂತಹ ಪವಿತ್ರ ಉದ್ದೇಶದಿಂದ ತ್ಯಾಗಿಗಳಾಗು ವವರು ಬಹಳ ಕಡಮೆ. ಅಂತಹ ದೀಕ್ಷೆಯನ್ನು ತೆಗೆದುಕೊಳ್ಳುವವರೂ ಶಾಸ್ತ್ರದ ಅನುಭವವನ್ನು ಚೆನ್ನಾಗಿ ಮಾಡಿದವರಾಗಿರುವುದಿಲ್ಲ. ಬರೇ ಕಾವಿ ಯನ್ನುಟ್ಟುಕೊಂಡ ಮಾತ್ರಕ್ಕೆ, ಜೀವನವನ್ನು ಸುಲಭವಾಗಿ ನಡೆಯಿಸುವ ಉಪಾಯ ಮಾಡಿದಂತಾಗುತ್ತದೆಂದು ತಿಳಿದವರು ಕುರುಡರನ್ನು ಒಯ್ಯುವ

ಕುರುಡರಾಗಿರುವುದಿಲ್ಲವೆ? ಧರ್ಮವೆಂದರೇನೆಂದು ತಾವೇ ಸರಿಯಾಗಿ ಅರಿಯದ ಮೇಲೆ ಇತರರಿಗೆ ಅವರು ಉಪದೇಶಿಸುವುದಾದರೂ ಹೇಗೆ? ಹೀಗಾಗಿ ಅವರು ಕಾವಿ ಧರಿಸಿದರೆಂದಲ್ಲದೆ ಬೇರೆ ಯಾವ ಪ್ರಯೋಜನವೂ ಆಗುವ ಹಾಗೆ ಕಾಣುವುದಿಲ್ಲ.

ನಮ್ಮ ಪೂರ್ವಿಕರು ಧರ್ಮಪ್ರಭಾವನೆಯ ದೃಷ್ಟಿಯಿಂದ ಮಠಗಳನ್ನು ಸ್ಥಾಪಿಸಿದರು. ಆ ಮಠಗಳಿಗೆ ಉಂಬಳಿ ಬಿಟ್ಟು, ಆ ಮಠಾಧಿಕಾರಿಗಳಿಗೆ ಯಾವ ತೊಂದರೆಯೂ ಇಲ್ಲದಂತೆ ಸಂಪತ್ತನ್ನು ಕೊಟ್ಟರು. ಧರ್ಮದ ಬೆಳಕು ಎಲ್ಲರ ಕಣ್ಣಿಗೆ ಗೋಚರವಾಗಬೇಕೆಂಬ ಘನವಾದ ಉದ್ದೇಶವನ್ನಿಟ್ಟು, ಆ ಮಠಾಧಿಕಾರಿಗಳಿಗೆ ಗೌರವದ ಸ್ಥಾನವನ್ನು ಕೊಟ್ಟರು. ಆದರೆ, ಮಠಗಳ ಮುಖ್ಯ ಕರ್ತವ್ಯ ಸಂಕುಚಿತವಾಗುತ್ತ ಬಂದು, ಮಠಗಳಿಗೂ ಸಮಾಜಕ್ಕೂ ಅನ್ಯೋನ್ಯಭಾವವು ತಪ್ಪಿ ಬಂದು, ಮಠಾಧಿಕಾರಿಗಳಿಗೂ ಜನತೆಗೂ ಸಾಮೀಪ್ಯವು ದೂರದೂರವಾಗುತ್ತ ಬಂದು, ಅವುಗಳೆರಡರ ಸಂಬಂಧವು ಕೇವಲ ಹಣದಷ್ಟಕ್ಕೆ ಬಂದಿಳಿದಿದೆ.

ನಮ್ಮಲ್ಲಿ ಧರ್ಮಜಾಗ್ರತಿ ಆಗಬೇಕಾದರೆ ಮೊದಲು, ನಮ್ಮ ಮಠ ಬಸದಿಗಳು ತಿರಿಗೊಮ್ಮೆ ಚಟುವಟಿಕೆಯಿಂದ ತುಂಬಬೇಕು; ತಿರಿಗೊಮ್ಮೆ ಪಾವಿತ್ರ್ಯದ ಗರ್ಭಗುಡಿಗಳಾಗಬೇಕು. ದೀಕ್ಷಾಬದ್ಧರಾದ ಗುರುಗಳು ಅಲ್ಲಲ್ಲಿ ಧರ್ಮಪ್ರಭಾವನೆ ಮಾಡುತ್ತೇವೆಂಬ ಸಂಕಲ್ಪವನ್ನು ಕೈಗೊಳ್ಳಬೇಕು. ಜ್ಞಾನಪ್ರಕಾಶದ ಮೂಲವಾಗಬೇಕು. ರತ್ನತ್ರಯದ ಕಂಠಿಯಾಗಬೇಕು. ಆ ದಿವಸವು ಬರುವುದಿಲ್ಲವಾದರೆ, ಮಠ ಬಸದಿಗಳ ಧ್ಯೇಯವು ಕಳಚಿದಂತಾಗುವುದು. ಗುರುಗಳ ಚರಿಗೆಯು ನಿರರ್ಥಕವಾಗುವುದು. ರತ್ನತ್ರಯದ ಕಂಠಿಯು ತುಟಿತವಾಗುವುದು. ಆದರೆ, ಧರ್ಮಜಾಗ್ರತಿಯ ದಿವಸವು ಬರುವಂತೆ ಮಾಡುವುದು ನಮ್ಮೆಲ್ಲರ ಹೆಬ್ಬಯಕೆಯಾಗಿದೆ. ಜ್ಞಾನ ಪ್ರಚಾರವಾಗಿ, ಸದ್ಗುಣ ಪರಂಪರೆಯುಂಟಾಗಿ ಆತ್ಮೋನ್ನತಿಯ ಕಾಲವು ಎಲ್ಲರಿಗೂ ಪ್ರಾಪ್ತವಾಗಲಿ.

# ನಮ್ಮ ಸಾಹಿತ್ಯ

ಒಂದು ಜನಾಂಗದ ಸಾಹಿತ್ಯವು ಆ ಜನಾಂಗದ ವೀರ ಪರಾಕ್ರಮದ ಗಂಭೀರ ಐತಿಹ್ಯವಾಗಿ ಪ್ರೋತ್ತುಂಗ ಭಾವನೆಗಳ ಸಲ್ಲಲಿತ ಚಾರಿತ್ರವಾಗಿ, ಹಿರಿಯರಿಗೊಂದು, ತಾವು ಜೀವಿಸಿದ ಪವಿತ್ರಜೀವನವೆಂದು ಕುರುಹಾಗಿ, ಕಿರಿಯರಿಗೊಂದು, ಹಿರಿಯ ಹೆಮ್ಮೆಯೆಂದು ಧ್ಯೇಯವಾಗಿ, ನಾಗರಿಕತೆಗೆ, ಕಲೆಗೆ, ಸಂಸ್ಕೃತಿಗೆ ಆಧಾರವಾಗಿರುತ್ತದೆ. ಒಂದು ಜನಾಂಗದ ಸಾಹಿತ್ಯದಲ್ಲಿ ಆ ಜನಾಂಗದ ಜನರ ಆಂತರಿಕ ಜೀವನವನ್ನು ನಾವು ಕಾಣಬಲ್ಲೆವು. "ಮಾನವ ವರ್ಗವು ಮಾಡಿದುದೆಲ್ಲ, ಯೋಚಿಸಿದುದೆಲ್ಲ, ಲಭಿಸಿಕೊಂಡುದೆಲ್ಲ ಸಾಹಿತ್ಯದ ಇಂದ್ರಜಾಲದಲ್ಲಿ ಉಳಿದುಕೊಂಡು ಬಂದಿದೆ. ಮನುಷ್ಯನ ಸೊತ್ತುಗಳಲ್ಲಿ ಸಾಹಿತ್ಯವೆಂಬುದು ಆರಿಸಿಕೊಂಡಿಟ್ಟ ಸೊತ್ತಾಗಿದೆ; ಅದು ಅಮೂಲ್ಯವಾದುದು," ಎಂದು ಕಾರ್ಲೈಲನು ಹೇಳಿರುತ್ತಾನೆ. ಹಿರಿಯರು ಕಿರಿಯರಿಗೆ ಅನಾದಿಕಾಲದಿಂದ ಮುಡಿಪಾಗಿಟ್ಟು ಕೊಟ್ಟ ವಸ್ತುಗಳಲ್ಲಿ ಸಾಹಿತ್ಯವು ಏಕಮೇವ ಅದ್ವಿತೀಯವಾಗಿವೆ.

ನಮ್ಮ ಹಿಂದಿನ ಸಾಹಿತ್ಯವು ನಮ್ಮ ಜೈನ ಜನಾಂಗವು ಹಿಂದುಸ್ಥಾನದ ಚರಿತ್ರೆಯಲ್ಲಿ ಸಾಹಸ ಮಾಡಿದ ಗಂಭೀರ ಐತಿಹ್ಯದ, ವೀರ ಪರಾಕ್ರಮದ ಮುದ್ರೆಯಾಗಿ ನಮಗೆಲ್ಲರಿಗೂ ಹಿರಿಯ ಹೆಮ್ಮೆಯಾಗಿದೆ. ಆ ಸಾಹಿತ್ಯವಿಂದು ನಮಗೆ ಕೌತುಕವಾಗಿ ಆಶ್ಚರ್ಯಜನಕವಾಗಿ ಕಂಡುಬರಬಹುದು. ಆ ಸಾಹಿತ್ಯವೆಲ್ಲ ಜ್ಞಾನವಿಜ್ಞಾನಮಯವಾಗಿ ಸಮಸ್ತ ವಿಷಯಗಳನ್ನು ಪ್ರತಿಪಾದಿಸಿ ಕೃತಕೃತ್ಯವಾಗಿರುತ್ತದೆ. ಭಗವಾನ್ ಮಹಾವೀರ ಸ್ವಾಮಿಯವರ ಕಾಲದಿಂದ ಭೂತಬಲಿ ಪುಷ್ಪದಂತಾಚಾರ್ಯರುಗಳ ಕಾಲದ ವರೆಗೆ ನಮ್ಮ ಸಾಹಿತ್ಯವು ಬೆಳೆದು ಬಂದು, ಕಡೆಗೆ ನಮ್ಮವರ ಗ್ರಹಣಶಕ್ತಿಯು ಕ್ಷೀಣವಾಗುವಾಗ ಆ ಸಾಹಿತ್ಯವೆಲ್ಲವನ್ನು ಲಿಪಿಬದ್ಧವಾಗಿ ಬರೆಯಬೇಕಾಯಿತು. ಶ್ರೀ ಕುಂದಕುಂದಾಚಾರ್ಯರ ಕಾಲದಲ್ಲಿ (ಅಂದರೆ ಕ್ರಿ. ಪೂ. 52ರಿಂದ ಕ್ರಿ. ಶ. 44) ಜೈನ ಸಾಹಿತ್ಯವು ಬಹಳ ಹೀನಾವಸ್ಥೆಗೆ ಬಂದು ಮುಟ್ಟಿತು. ರಾಜಶಿಷ್ಯನಾದ ಶಿವಸ್ಕಂದವರ್ಮನ

ಪ್ರಾರ್ಥನೆ ಮೇರೆಗೆ ಕುಂದಕುಂದಾಚಾರ್ಯರು ತತ್ತ್ವಗ್ರಂಥಗಳನ್ನು ಬರೆದರು. ಅನಂತರ ಬೇರೆ ಆಚಾರ್ಯರುಗಳು ಗ್ರಂಥಗಳನ್ನು ಬರೆಯಲಿಕ್ಕೆ ಪ್ರಾರಂಭಿಸಿದರು. ಶ್ರೀ ಕುಂದಕುಂದಾಚಾರ್ಯರು ಮತ್ತು ಅವರನಂತರದ ಆಚಾರ್ಯರುಗಳು ಮತ್ತೆ ಶ್ರಮಪಡದಿದ್ದರೆ, ಜೈನಧರ್ಮವು ಎಂದೋ ನಾಶವಾಗುತಿತ್ತು. ಕಾರಣ, ಪ್ರತಿಯೊಂದು ಧರ್ಮವೂ ಅದರ ಸಾಹಿತ್ಯದಿಂದಾಗಿ ಬದುಕಿರುತ್ತದೆ.

ಯಾವಾಗ ಒಂದು ಜನಾಂಗವು ಸಾಹಿತ್ಯಪ್ರಚೋದಕವಾಗುವಂತಹ ಜೀವನವನ್ನು, ಸಂಸ್ಕೃತಿಯನ್ನು, ನಾಗರಿಕತೆಯನ್ನು ಜೀವಿಸಿಕೊಳ್ಳುವುದಿಲ್ಲವೋ ಆ ಜನಾಂಗವು ಅಧೋಗತಿಗೆ ಇಳಿಯುವುದೆಂದು ನಾವು ತಿಳಿದುಕೊಳ್ಳಬಹುದು. ಸಾಹಿತ್ಯವೆಂಬುದು ಜೀವನದ ಮೊತ್ತವಾದರೆ, ಜನಾಂಗವು ಜೀವಿಸಿದಂತೆ, ಅದರ ಸಾಹಿತ್ಯವು ಬೆಳೆಯಬೇಕಾಗಿದೆ. ಹಿಂದಿನವರ ಸಾಹಿತ್ಯವು ಎಷ್ಟು ಗಂಭೀರವಾಗಿದ್ದರೂ, ಎಷ್ಟು ಲಲಿತವಾಗಿದ್ದರೂ ಅದು ಉತ್ತರೋತ್ತರ ಪ್ರಚೋದಕವಲ್ಲದೆ, ತನ್ನಿಂದಾಗಿಯೇ ಸಂಪೂರ್ಣವಾಗುವುದಿಲ್ಲ. ಮಹಾವೀರ ಸ್ವಾಮಿಯ ಕಾಲದನಂತರ ಕೆಲಕಾಲ ನಮ್ಮ ಜನಾಂಗದ ಸಾಹಿತ್ಯ ಹೀನಾವಸ್ಥೆಗೆ ಬಂದಾಗ ಶ್ರೀ ಕುಂದಕುಂದಾಚಾರ್ಯರಂತಹವರು ತಿರಿಗೊಮ್ಮೆ ಜ್ಞಾನದ ಬೆಳಕನ್ನು ಕೈಯಿಂದ ಕೈಗೆ ಕೊಡಲುದ್ಯುಕ್ತರಾದರು.

ಪ್ರತಿಯೊಂದು ಧರ್ಮವೂ ಅದರ ಸಾಹಿತ್ಯದಿಂದಾಗಿ ಬದುಕಿರುತ್ತದೆ. ಬೈಬಲನ್ನು ಅಲ್ಲಗಳೆದರೆ ಕ್ರೈಸ್ತ ಧರ್ಮವಿಲ್ಲ; ಕುರಾನನ್ನು ಬಿಟ್ಟರೆ ಇಸ್ಲಾಂ ಧರ್ಮವಿಲ್ಲ. ಅದರಂತೆ ಜೈನ ಸಾಹಿತ್ಯವಿಲ್ಲದಿದ್ದರೆ ಜೈನಧರ್ಮವಿರುವುದಿಲ್ಲ. ಕ್ರೈಸ್ತರು ತಮ್ಮ ಧರ್ಮಸರ್ವಸ್ವವಾದ ಬೈಬಲನ್ನು ಪ್ರಚಾರಗೊಳಿಸಲು ಎಷ್ಟು ಕೆಲಸ ಮಾಡುತ್ತಿರುವರೆಂಬುದು ಜನವಿದಿತವಾದ ಸಂಗತಿಯಾಗಿದೆ. ಕ್ರಿಶ್ಚಿಯನ್ ಲಿಟರೇಚರ್ ಸೊಸ್ಯಾಟಿಯು ಅತ್ಯದ್ಭುತವಾದ ಕೆಲಸವನ್ನು ಈ ಕ್ಷೇತ್ರದಲ್ಲಿ ಮಾಡುತ್ತಿದೆಯೆಂದು ತಿರಿಗಿಲ್ಲಿ ಪ್ರಸ್ತಾವಿಸುವುದು ಚರ್ವಿತಚರ್ವಣವಾಗಬಹುದು.

ಸಾಹಿತ್ಯವೇ ನಮ್ಮ ಧರ್ಮದ ಜೀವಾಳವೆಂದಾಗ, ನಮಗೆ ಸಂಶಯವು ಉತ್ಪನ್ನವಾಗಬಹುದು. ಸಾಹಿತ್ಯವೇ ಜೈನ ಧರ್ಮದ ಜೀವಾಳ

ವಾಗಿದೆ. ಏಕೆಂದರೆ, ಸಾಹಿತ್ಯವು ಜನರು ಜೀವಿಸಿದ ಜೀವನದ ಅನುಭವ ವಾಗಿದೆ. ಜೀವನದ ಅನುಭವದಿಂದ ಭಿನ್ನವಾದ ಸತ್ಯವು ಇರುವುದಿಲ್ಲ ವೆಂಬುವನ್ನು ಪ್ರತ್ಯೇಕ ಸಿದ್ಧಾಂತ ಮಾಡುವ ಅಗತ್ಯವಿಲ್ಲ. ಸಾಹಿತ್ಯದ ಸತ್ಯವು, ಸತ್ಯದ ಸಾಹಿತ್ಯವು, ಕಲ್ಪಾಂತ್ಯಕ್ಕೂ ಧ್ರುವತಾರೆಯಾಗಿ ನಿಲ್ಲು ವುದು. ಆದರೆ ಈ ಸಾಹಿತ್ಯದ ಪ್ರಚಾರಕ್ಕೆ, ಈ ಸಾಹಿತ್ಯವು ಸಾನು ಬಂಧವಾಗಿ ಬೆಳೆಯುವಂತೆ ಮಾಡಲಿಕ್ಕೆ ಸಂಸ್ಥೆ ಒಂದಾದರೂ ನಮ್ಮಲ್ಲಿ ದೆಯೇ? ಹಳೆಯ ಗ್ರಂಥಗಳನ್ನು ಪ್ರಚಾರಮಾಡುವುದಂತಿರಲಿ, ಅವು ಗಳನ್ನು ಬೆಳಕಿಗೆ ತರಲೂ ಅಂಜುತ್ತಿದ್ದಾರೆ. ಜೀವನಕ್ಕೆ ಬೆಳಕು ಕೊಡುವ ಸಾಹಿತ್ಯವು, ಇಂದಿನ ದಿವಸ ಕತ್ತಲೆಯ ಗವಿಗಳಲ್ಲಿ ಹುದುಗಿರಬೇಕಾ ದುದು ಒಂದು ಕಾಲಾವಸ್ಥೆಯೆಂದೇ ನಾವು ತಿಳಿಯಬೇಕಾಗಿದೆ. ಮಾರ್ಗ ಪ್ರಭಾವನೆಯು ನಮ್ಮ ಧರ್ಮದ ಒಂದು ಅಂಗವು. ಆದರೆ ಅದನ್ನು ಯಾರು ತಿಳಿಯುತ್ತಾರೆ? ನಮ್ಮ ಅಸಡ್ಡೆಯಿಂದ ನಮ್ಮ ಎಷ್ಟೋ ಗ್ರಂಥ ಗಳು ಪರರ ಪಾಲಿಗೆ ಸೇರಿ ಹೋದುವು. ಈಗ ಉಳಿದ ಗ್ರಂಥಗಳು, ನಾಶವಾದ ಗ್ರಂಥಗಳ ನೂರಂಶವೆನ್ನಬಹುದು. ಸಮಂತಭದ್ರರ "ಗಂಧ ಹಸ್ತಿ ಮಹಾಭಾಷ್ಯೆಯು" ಎಲ್ಲಿದೆ? ಎಲ್ಲಿದೆ? ಎಂಬ ಉತ್ತರವೇ ಸಿಗು ತ್ತಿದೆ. ಜೈನ ಸಾಹಿತ್ಯವನ್ನು ನಾಶಮಾಡಿದ ವಿಷಾದಕರ ವಿಷಯಗಳನ್ನು ನಾವು ಚರಿತ್ರೆಯಿಂದ ಕೇಳಿರಬಹುದು. ಆ ಗ್ರಂಥಗಳ ಪ್ರತಿಗಳು ಹೆಚ್ಚು ಹೆಚ್ಚಾಗಿ ಸಿದ್ಧವಾಗಿದ್ದ ಪಕ್ಷದಲ್ಲಿ ಇಂದು ನಾಮಶೇಷವಾಗುತ್ತಿದ್ದಿಲ್ಲ ವೇನೋ ಎಂದು ಸಂಶಯವಾಗುತ್ತಿದೆ. ಅಜೈನರು ಎಷ್ಟೋ ಉತ್ತಮ ಗ್ರಂಥಗಳನ್ನು ತಮಗೆ ಸರಿಯಾಗಿ ಮಾರ್ಪಡಿಸಿ ತಮ್ಮದೆಂದೇ ಪ್ರಕಟ ಮಾಡಿದರು. ಎಷ್ಟೋ ಗ್ರಂಥಗಳು ಕ್ರಿಮಿಕೀಟಗಳಿಗೆ ತುತ್ತಾಗಿ ಹೋದುವು. ಆಚಾರ್ಯರುಗಳ ಶ್ರಮಪೂರ್ಣವಾದ ಫಲವು ಇಂಥಾ ದುರವಸ್ಥೆಗೆ ತುತ್ತಾ ದುದೆಂದರೆ ನಮ್ಮ ದುರದೃಷ್ಟವೆಂದು ಹೇಳಬೇಕು.

ಸಾಹಿತ್ಯದಿಂದಾಗದ ಕೆಲಸವೇನು? ಹಿಬ್ರೂ ಧರ್ಮ ಗ್ರಂಥದ ಪ್ರಚೋದನೆಯಿಂದ "ಸೈಂಟ್ ಪೋಲ್" ಎಂಬ ಆ ಭವ್ಯವಾದ ಇಗರ್ಜಿ ಹುಟ್ಟಿತು. ನಿರ್ಜೀವವಾದ ಕಲ್ಲುಗಳಿಂದ ಹುಟ್ಟಿ, ಹರಿಯುವ ವಾಯುವಿ ನಲ್ಲಿ ಮೊಗವನ್ನು ತೋರಿ, ಲಕ್ಷೋಪಲಕ್ಷ ಜನಗಳಿಗಿಂದು ದುಃಖದ

ಕಾಲದಲ್ಲಿ ದುಃಖವನ್ನು ತಣಿಸಿ, ಸುಖದ ಕಾಲದಲ್ಲಿ ಸುಖವನ್ನು ಉಣ್ಣಿಸಿ, ಆ ಇಗರ್ಜಿ ಪಾವನತಮವಾಗಿದೆ. ಕನ್ನಡ ದೇಶದ ಬಾಹುಬಲಿಯ ಮೂರ್ತಿಯು ನಿರ್ಮಾಣವಾದುದಕ್ಕೆ ಕನ್ನಡ ಸಾಹಿತ್ಯವು ಹೇತುವಾಗಿಲ್ಲವೆ? ಕನ್ನಡ ಸಾಹಿತ್ಯದ ಭಾವನಾಪ್ರಪಂಚದಲ್ಲಿ ಪರಮಶಾಂತಿಯ ಮೂರ್ತಿಯನ್ನು ಕಂಡ ಶಿಲ್ಪಿ, ಚಾವುಂಡರಾಯನಿಗೆ ನೋಡಲೆಂದು ಕಣ್ಣಿಗೆ ಕಾಣುವ ವಸ್ತುವಿನಿಂದ, ಚೇತನಾರಹಿತವಾದ ಶಿಲೆಯ ಕಲ್ಲಿನಿಂದ ಕಷ್ಟ ಸಹಿಷ್ಣುವಾಗಿ ಪರಮಶಾಂತಿಯ ಧೈರ್ಯದಿಂದ ಹೃದಯವನ್ನು ಮುಂದೊತ್ತಿ, ತಲೆಯನ್ನು ಮೇಲೆತ್ತಿ ನಿಂತ ಭವ್ಯವಾದ ಮೂರ್ತಿಯನ್ನು ರಚಿಸಿ ಕೊಟ್ಟಿಲ್ಲವೆ? ಪೂಜ್ಯಪಾದ ಮತ್ತು ವಿದ್ಯಾನಂದರೆಂಬ ಬ್ರಾಹ್ಮಣ ವಿದ್ವಾಂಸರು ಜೈನ ಧರ್ಮವನ್ನು ಸ್ವೀಕರಿಸಲು ಕಾರಣವು ಏನು? ನಮ್ಮ ಗ್ರಂಥಗಳ ಶ್ರೇಷ್ಠತೆಯಲ್ಲವೆ?

ನಾವು ನಮ್ಮ ಸಾಹಿತ್ಯವನ್ನು ಕಾಣಬೇಕು; ತಿಳಿಯಬೇಕು; ಅದನ್ನಿನ್ನು ಕ್ರಿಮಿಕೀಟಗಳ ಪಾಲಿಗೆ ಬಿಡಬಾರದು; ಹಳೆಯ ಗ್ರಂಥಗಳನ್ನು ಆದಷ್ಟು ಪ್ರಚಾರ ಮಾಡಲು ನೋಡಬೇಕು; ಹೊಸ ಗ್ರಂಥಗಳನ್ನು ಸೃಷ್ಟಿಸಲು ಯೋಚಿಸಬೇಕು; ಪುಸ್ತಕ ಭಂಡಾರಗಳನ್ನು ಅಲ್ಲಲ್ಲಿ ತೆರೆಯಬೇಕು; ಗ್ರಂಥಗಳನ್ನು ಶೇಖರಿಸಬೇಕು; ಶಾಸನಗಳನ್ನು ಸಂಗ್ರಹಿಸಬೇಕು; ಉತ್ತಮ ಗ್ರಂಥಗಳನ್ನು ಪ್ರಕಾಶಪಡಿಸಬೇಕು. ಸುಶಿಕ್ಷಿತ ಜೈನ ಮಹಾಶಯರ ಸಾಹಾಯ್ಯವು ಅವುಗಳಿಗಿರಬೇಕು; ಹೀಗಾದರೇನೇ ಧರ್ಮಪ್ರಭಾವನೆಯಾದೀತು.

# ಶ್ರುತಪಂಚಮಿ

ನಮ್ಮ ತೀರ್ಥಂಕರರು ಉಪದೇಶಿಸಿದ ಸನಾತನವಾದ ಜೈನವೇದಗಳು ದ್ವಾದಶಾಂಗವಾಗಿ ಇದ್ದುವು. 24ನೇ ತೀರ್ಥಂಕರರು ಕೈವಲ್ಯವನ್ನು ಹೊಂದಿದನಂತರ ಈ ಜೈನ ವೇದಗಳನ್ನು ಗೌತಮ ಮೊದಲಾದ ಕೇವಲಿಗಳು ಪ್ರಚಾರಮಾಡುತ್ತ ಬಂದರು. ಕ್ರಮೇಣ ಮನುಷ್ಯನ ಶರೀರ ಪರಿಮಾಣವೂ ಆಯುಷ್ಯ ಪರಿಮಾಣವೂ ಬುದ್ಧಿಶಕ್ತಿಯೂ ಕುಂದುತ್ತ ಬಂದ ಕಾರಣ, ಗುರುಪರಂಪರೆಯಲ್ಲಿಯೂ ಧಾರಣಾಶಕ್ತಿಯು ಕಡಮೆಯಾಗುತ್ತ ಬಂದಿತು. ಕ್ರಿ. ಶ. 156ರ ಸುಮಾರಿಗೆ ಜೈನ ವೇದದ ದ್ವಾದಶಾಂಗಗಳಲ್ಲಿ ಒಂದು ಅಂಗದಷ್ಟು ವೇದ ಮಾತ್ರ ಅಹಿಬಲಾಚಾರ್ಯ ಮೊದಲಾದ ಗುರುಗಳಲ್ಲಿ ಉಳಿದಿತ್ತು. ಉಳಿದ ಭಾಗಗಳು ಸಂಪೂರ್ಣವಾಗಿ ಲುಪ್ತವಾಗದಿದ್ದರೂ, ಅವುಗಳು ಸಮಗ್ರವಾಗಿ ಸಿಕ್ಕುವಂತಹುದು, ತಿಳಿಯುವಂತಹುದು ಪ್ರಯಾಸವಾಯಿತು. ಇಷ್ಟು ಕಾಲವೂ ವೇದಶಾಸ್ತ್ರಗಳನ್ನೆಲ್ಲ ಕುಶಾಗ್ರಬುದ್ಧಿಯುಳ್ಳ ಮುನಿಗಳು ತಮ್ಮ ಧಾರಣಾಶಕ್ತಿಯಿಂದ ಗ್ರಹಣ ಮಾಡುತ್ತ ಬಂದರಲ್ಲದೆ, ಅವುಗಳನ್ನು ಬರೆದಿಡುತ್ತಿರಲಿಲ್ಲ. ಹೀಗೆ ಈ ವೇದಗಳು ಗುರುವಿನಿಂದ ಶಿಷ್ಯನಿಗೆ ಉಪದೇಶ ಪರಂಪರೆಯಿಂದ ಪ್ರಾಪ್ತವಾಗಿ ಬರುತ್ತಿದ್ದುವು.

ಇಷ್ಟು ಕಾಲವೂ ಜ್ಞಾನಪ್ರಾಪ್ತಿಯು **ಗುರುಪರಂಪರೆಯಿಂದ** ಮುಖದಿಂದ ಮುಖಕ್ಕೆ ಬರುತ್ತಿದ್ದಿತು. ಆದರೆ, ಕಾಲವಶದಿಂದ ಮನುಷ್ಯನ ಧಾರಣಾಶಕ್ತಿಯು ಕ್ಷೀಣವಾಗುತ್ತ ಬರುತ್ತಿರುವುದನ್ನು ಕಂಡು, ಜ್ಞಾನವು ಅಳಿಯದ ಹಾಗೆ ಮಾಡುವಂತಹುದು ಒಂದು ಆವಶ್ಯಕತೆಯಾಗಿ ಕಂಡು ಬಂದಿತು. ಆ ಕಾಲಕ್ಕೆ ಲಿಪಿಯು ಸಂಶೋಧನೆಯು ಆಗಿದ್ದು, ಆ ಸಂಶೋಧನೆಯ ಫಲವನ್ನು ಪ್ರಯೋಜನಕ್ಕೆ ಬಳಸಿಕೊಂಡರು. **ಪುಷ್ಪದಂತ ಭೂತಬಲ್ಯಾಚಾರ್ಯರುಗಳು** ಆಗ ಉಪಸ್ಥಿತವಾದ ಗ್ರಂಥಗಳನ್ನು ಲಿಪಿಬದ್ಧವಾಗಿ ಬರೆಯಲು ಪ್ರಾರಂಭಿಸಿದರು.

ಗ್ರಂಥಗಳನ್ನು ಲಿಪಿಬದ್ಧವಾಗಿ ಜ್ಯೇಷ್ಠ ಶುದ್ಧ ಪಂಚಮಿಯ ದಿವಸ ಬರೆದು ಮುಗಿಸಿ, ಋಷಿ, ಆರ್ಯಿಕಾ, ಶ್ರಾವಕ, ಶ್ರಾವಿಕೆಯರೆಂಬ ಚತುಃ ಸಂಘಗಳನ್ನು ಸೇರಿಸಿ ಆ ಶಾಸ್ತ್ರಗ್ರಂಥಗಳನ್ನೆಲ್ಲ ಅಲಂಕರಿಸಿ ಭಕ್ತಿಭಾವದಿಂದ ಪೂಜಿಸಿದರು. ಅಂದಿನಿಂದ ಜೈನರಿಗೆ ಜ್ಯೇಷ್ಠ ಶುದ್ಧ ಪಂಚಮಿಯು **ಶ್ರುತಪಂಚಮಿ**ಯೆಂಬ ಪವಿತ್ರ ಪರ್ವತಿಥಿಯಾಗಿರುವುದು.

ಲಿಪಿಯ ಸಂಶೋಧನೆಯನ್ನು ಧರ್ಮಕ್ಷೇತ್ರದಲ್ಲಿ ಬಳಸಿಕೊಂಡು, ಇದರ ಪರಿಣಾಮವಾಗಿ ಪೂರ್ವಿಕರು ತಿಳಿದ ಜ್ಞಾನವು ಯಾವ ಕಾಲಕ್ಕೂ ಅಳಿಯದಂತೆ ಮಾಡಿಕೊಂಡು, ಆ ಜ್ಞಾನವು ಸಂತತವಾಗಿ, ಅವ್ಯಾಹತವಾಗಿ ಮುಂದುವರಿಯುವಂತೆ ಆಣಿ ಮಾಡಿದಂತಾಯಿತು. ಜ್ಞಾನವು ಲಿಪಿಬದ್ಧವಾಯಿತು ಎಂದು ಹೇಳಿದೊಡನೆ, ಆ ಜ್ಞಾನವು ವಿಪುಲವಾದ ಈ ಪೃಥಿವಿಯಲ್ಲಿ ಮತ್ತು ಅನಂತವಾದ ಕಾಲದಲ್ಲಿ ಚಿರಕಾಲ ಉಳಿಯುವಂತೆ ಮಾಡಿಟ್ಟಂತಾಯಿತು. ಆದರೆ, ಜ್ಞಾನವು ಲಿಪಿಯ ಮೂಲಕ ಉಳಿಸಿಕೊಳ್ಳಲ್ಪಟ್ಟಿತು. ಆದುದರಿಂದ ಈ ಜ್ಞಾನವು ನಷ್ಟವಾಗಬಹುದೆಂದು ನಾವೇನೂ ಹೆದರಬೇಕೆಂತಿಲ್ಲವೆಂದು ಎಣಿಸಬಾರದು. ಲುಪ್ತವಾಗಬಹುದಾದ ಜ್ಞಾನವನ್ನು ಲಿಪಿಯಲ್ಲಿ ಹಿಡಿದಾದನಂತರ, ಹಿಡಿದುದನ್ನು ಚೆನ್ನಾಗಿ ಗ್ರಹಿಸುವಂತಹುದು ಒಂದು ಕರ್ತವ್ಯವಾಗಿಯೇ ಉಳಿಯುತ್ತದೆ. ಯಾವ ಗ್ರಂಥವೇ ಆಗಲಿ, ಅದರ ಜ್ಞಾನವು ಲಿಪಿಪ್ರಧಾನವಾದುದಲ್ಲ. ಲಿಪಿಯ ಹಿಂದಕ್ಕೆ ಇದ್ದ ಅರ್ಥವು ವಾಚಕನಿಗೆ ಗೊತ್ತಾದರೆ ತಾನೆ, ಜ್ಞಾನಪ್ರಾಪ್ತಿಯೆನ್ನಬಹುದು?

ಹೀಗೆ ಎಷ್ಟೋ ಗ್ರಂಥಗಳು ಬರೆಯಿಸಲ್ಪಟ್ಟರೂ, ಆ ಗ್ರಂಥಗಳ ಸಮ್ಯಕ್ ಪಠನವು ಗುರುಮುಖದಿಂದಲೇ ಆಗಬೇಕಾಗಿದೆ. ಗುರುವು ತಾನು ತಿಳಿದ ತತ್ತ್ವಗಳನ್ನು ತನ್ನ ಶಿಷ್ಯರ ಹೃದಯದಲ್ಲಿ ತುಂಬಿಸುವನು: ಕಿವಿಯಿಂದ, ಕಣ್ಣಿನಿಂದ, ಪ್ರತಿಭೆಯಿಂದ, ಜ್ಞಾನತೃಷ್ಣೆಯಿಂದ ಆ ತತ್ತ್ವಗಳನ್ನು ಶಿಷ್ಯನು ತನ್ನ ಹೃದಯದಲ್ಲಿ ಹಿಡಿದುಕೊಳ್ಳುವನು. ಹೊಯ್ಯಲ್ಪಟ್ಟ ಆ ತತ್ತ್ವಗಳು ಶಿಷ್ಯನ ಹೃದಯದಲ್ಲಿ ಶಾಶ್ವತವಾಗಿ ಸ್ಥಾಪಿಸಲ್ಪಡುವವು. ಶಿಷ್ಯನು ಅನಂತರ ತನ್ನಲ್ಲಿಯೆ ಅದನ್ನು ವಿಚಾರಿಸಿ, ವಿಮರ್ಶಿಸಿ,

ತನ್ನದನ್ನಾಗಿ ಮಾಡಿ ಲೋಕಹಿತಕ್ಕಾಗಿ ಉಪಯೋಗಿಸುವನು. ಹೀಗೆ ಜ್ಞಾನವೆಲ್ಲ ಲಿಪಿಬದ್ಧವಾಗಿ ನಿಂತರೂ, ಗುರುಪರಂಪರೆಯ ಶಾಸ್ತ್ರಾಭ್ಯಾಸವು ನಿಂತು ಹೋಯಿತೆಂದು ಎಣಿಸಬಾರದು. ಹಾಗೆ ಎಣಿಸಿದರೆ, ಆ ಜ್ಞಾನವು ಲಿಪಿ ಮಾತ್ರವಾಗಿಯೇ ಇದ್ದು, ಯಾವ ಪ್ರಯೋಜನಕ್ಕೂ ಬಾರದೆ ಹೋಗಬಹುದು. ಲಿಪಿಯಲ್ಲಿ ಅಡಕವಾದ ಜ್ಞಾನವನ್ನು ಹುಡಕಿ, ತಿಳಿದು, ವಿವರಿಸಬೇಕಾಗುತ್ತದೆ.

ಹೀಗೆ ಶ್ರುತಪಂಚಮಿಯ ದಿನ ಲಿಪಿಯ ಸಂಶೋಧನೆಯನ್ನು ನಮ್ಮ ಪೂರ್ವಿಕರು ಧರ್ಮಕ್ಷೇತ್ರದಲ್ಲಿ ಬಳಸಿಕೊಂಡುದನ್ನು ಸ್ಮರಿಸಿ, ಆ ಗ್ರಂಥಗಳೆಲ್ಲವನ್ನು ಅಲಂಕರಿಸಿ ಪೂಜಿಸುವಾಗ, ಇಷ್ಟಕ್ಕೆ ಮುಗಿಯಿತು ಎಂದು ತಿಳಿಯಬಹುದೇ? ಈ ಗ್ರಂಥಗಳನ್ನು ಪೂಜಿಸುವುದರ ಹೊರತು ಉಳಿದ ಯಾವ ಪುರುಷಾರ್ಥವು ಇರುವುದಿಲ್ಲ ಎಂದು ನಾವು ತಿಳಿಯಬಾರದು. ಜ್ಞಾನವು ಲಿಪಿಬದ್ಧವಾದ ದಿನವನ್ನು ಸ್ಮರಿಸಬೇಕು. ಅದರೊಡನೆ, ಜ್ಞಾನದ ಸಂಪಾದನೆಗಾಗಿ ನಾವು ಪ್ರಯತ್ನಿಸಬೇಕು. ಜ್ಞಾನವು ಲಿಪಿಬದ್ಧವಾಗದೆ ಇರುತ್ತಿದ್ದರೆ, ಅದು ಖಿಲವಾಗುತ್ತಿತ್ತು. ಆದರೆ ಇಂದು, ಲಿಪಿಯ ಕಾರಣದಿಂದ ನಮಗೆ ಉಳಿದುಬಂದಿದೆ. ನಾವು ಮಾತ್ರ ಅದರ ಪ್ರಯೋಜನವನ್ನು ಹೊಂದದಿರಬಾರದು.

## ಗುರುಪರಂಪರೆ

### ವೀರನಿರ್ವಾಣದನಂತರ—ಶ್ರುತಪಂಚಮಿಯ ಪ್ರಾರಂಭದ ತನಕ

| | | ವರ್ಷ |
|---|---|---|
| 1. ಗೌತಮ | ಕೇವಲಿ | 12 |
| 2. ಸುಧರ್ಮ | ,, | 12 |
| 3. ಜಂಬೂಸ್ವಾಮಿ | ,, | 38 |
| 4. ವಿಷ್ಣು | ಶ್ರುತಕೇವಲಿ | 14 |
| 5. ನಂದಿಮಿತ್ರ | ,, | 16 |
| 6. ಅಪರಾಜಿತ | ,, | 22 |
| 7. ಗೋವರ್ಧನ | ,, | 19 |
| 8. ಭದ್ರಬಾಹು | ,, | 29 |
| 9. ವಿಶಾಖಾಚಾರ್ಯ | ದಶಪೂರ್ವಧಾರಿ | 10 |
| 10. ಪ್ರೋಷ್ಠಿಲ | ,, | 19 |
| 11. ಕ್ಷತ್ರಿಯ | ,, | 17 |
| 12. ಜಯಸೇನ | ,, | 21 |
| 13. ನಾಗಸೇನ | ,, | 18 |
| 14. ಸಿದ್ಧಾರ್ಥ | ,, | 17 |
| 15. ಧೃತಿಷೇಣ | ,, | 18 |

| | | ವರ್ಷ |
|---|---|---|
| 16. ವಿಜಯ ದಶಪೂರ್ವಧಾರಿ | | 13 |
| 17. ಬುದ್ಧಿಲಿಂಗ | ,, | 20 |
| 18. ದೇವ | ,, | 14 |
| 19. ಧರ್ಮಸೇನ | ,, | 14 (16) |
| 20. ನಕ್ಷತ್ರ ಹನ್ನೊಂದು ಅಂಗಧಾರಿ | | 18 |
| 21. ಜಯಪಾಲ | ,, | 20 |
| 22. ಪಾಂಡವ | ,, | 39 |
| 23. ಧ್ರುವಸೇನ | ,, | 14 |
| 24. ಕಂಸ | ,, | 32 |

| | | ವರ್ಷ |
|---|---|---|
| 25. ಸುಭದ್ರ 10, 9 ಯಾ 8 ಅಂಗಧಾರಿ | | 6 |
| 26. ಯಶೋಭದ್ರ | ,, | 18 |
| 27. ಭದ್ರಬಾಹು | ,, | 23 |
| 28. ಲೋಹಾಚಾರ್ಯ | ,, | 52 (50) |
| 29. ಅರ್ಹದ್ಬಲಿ ಏಕಾಂಗಧಾರಿ | | 28 |
| 30. ಮಾಘನಂದಿ | ,, | 21 |
| 31. ಧರಸೇನ | ,, | 19 |
| 32. ಪುಷ್ಪದಂತ | ,, | 30 |
| 33. ಭೂತಬಲಿ | ,, | 20 |
| | | 683 |

# ನೃಪತುಂಗನ ಕಾಲದಲ್ಲಿ ಪುನಃ ವಿದ್ಯಾಸಂಜೀವನ

ಕನ್ನಡ ಸಾಹಿತ್ಯದ ಪ್ರಾದುರ್ಭಾವವು ರಾಷ್ಟ್ರಕೂಟರ ಅಮೋಘ ವರ್ಷ—ನೃಪತುಂಗನ ಕಾಲದಿಂದ ಮುಂದಕ್ಕೆ ಸ್ಪಷ್ಟವಾದ ರೂಪವನ್ನು ತಾಳಿಕೊಂಡು ಕನ್ನಡ ಜನಾಂಗಕ್ಕೆ, ಕನ್ನಡ ದೇಶಕ್ಕೆ ವಾಙ್ಮಯ ಜ್ಯೋತಿಯನ್ನು ಉರಿಸಿ ಕೊಟ್ಟಿತು ಎಂಬುದು ಎಲ್ಲರಿಗೂ ತಿಳಿದ ವಿಷಯವಾಗಿದೆ. ಈ ಕಾಲಕ್ಕಿಂತ ಹಿಂದೆ ಕನ್ನಡ ಸಾಹಿತ್ಯವು ಯಾವೊಂದು ವಿಶೇಷವಾದ ವ್ಯಕ್ತಿತ್ವವನ್ನು ಪಡಕೊಂಡಂತೆ ತೋರಿಬರುವುದಿಲ್ಲ. ಒಂದು ವೇಳೆ ಏನಾದರೊಂದು ಗ್ರಂಥವು ಆ ಕಾಲದಲ್ಲಿ ಹುಟ್ಟಿದ್ದೇ ಇದ್ದಿದ್ದರೆ, ನೃಪತುಂಗನನಂತರದಲ್ಲಿ ಪಂಪರನ್ನಾದಿಗಳಿಂದ ಸೃಷ್ಟಿಸಲ್ಪಟ್ಟ ಗಂಭೀರವಾದ ವಾಙ್ಮಯದಿಂದ ಅದೆಲ್ಲವೂ ಅಡಗಿಸಲ್ಪಟ್ಟು ನಿಸ್ತೇಜವಾಗಿ ಹೋಗಿರಬೇಕೆಂದು ಊಹಿಸಬಹುದು. ಅಥವಾ ಕನ್ನಡ ಜನಾಂಗವು ಅಂದಿನ ಸಮಯದ ವರೆಗೆ ಸ್ವತಂತ್ರವಾದಂತಹ ತಮ್ಮದೇ ಆದ ಒಂದು ಸಾಹಿತ್ಯವನ್ನು ಸೃಷ್ಟಿಸುವಷ್ಟು ತೇಜಸ್ಸನ್ನು ಸಂಪಾದಿಸಿಲ್ಲದೆ, ಬೇರೆ ಸಾಹಿತ್ಯಗಳ ಆಶ್ರಯದಲ್ಲಿಯೋ ಜೀವಿಸುತ್ತಿದ್ದಿರಬಹುದು. ಆದರೆ, ನೃಪತುಂಗನ ಕಾಲದಿಂದ ಇಂದಿನ ದಿವಸದ ವರೆಗೂ ಕನ್ನಡ ಜನಾಂಗಕ್ಕೆ ಅವಿಚ್ಛಿನವಾಗಿ, ಅನುಸಂತತವಾಗಿ ಬೆಳೆದು ಬಂದ ಕನ್ನಡ ಸಾಹಿತ್ಯವು ಜನಜೀವನದಲ್ಲಿ ಹಾಸುಹೊಕ್ಕಾಗಿ ನಿಂತು ಬಂದಿರುತ್ತದೆ. ಹೀಗೆ ಕನ್ನಡವು ವಾಙ್ಮಯಾವತಾರವನ್ನು ತಾಳಿ ತೋರಿಬಂದುದು ನೃಪತುಂಗನ ಕಾಲದಿಂದ ಎಂಬುದೆಂದು ಸಿದ್ಧಾಂತವಾಗಿ ಅಲ್ಲದಿದ್ದರೂ ಅನುಮಾನರೂಪವಾಗಿ ಹೇಳಿದಂತಾಗುತ್ತದೆ.

ಕನ್ನಡ ಸಾಹಿತ್ಯದ ಅಭಿವೃದ್ಧಿಯನ್ನು ಮಾಡಿಕೊಟ್ಟವರಲ್ಲಿ ನೃಪತುಂಗನೊಬ್ಬನು ಎಂಬುದರಲ್ಲಿ ಯಾವ ಭಿನ್ನಾಭಿಪ್ರಾಯವೂ ಇರಲಾರದು. ಈ ನೃಪತುಂಗನ ಕಾಲದಲ್ಲಿಯೇ ಕನ್ನಡ ಜನಾಂಗದವರಲ್ಲಿ ಪುನಃವಿದ್ಯಾಸಂಜೀವನ (Revival of Letters)ವುಂಟಾಯಿತು. ಆ ಕಾಲದ ವರೆಗೆ ಜನಸಾಮಾನ್ಯರಲ್ಲಾಗಲಿ ವಿದ್ವಾಂಸರಲ್ಲಾಗಲಿ ಸಾಹಿತ್ಯೋತ್ಪತ್ತಿ

ಯನ್ನು ಮಾಡುವಂತಹ ತೇಜಸ್ಸು ಬೇಕಾದ ಪ್ರಮಾಣದಲ್ಲಿದ್ದಿರಲಿಲ್ಲ. ಶ್ರೇಷ್ಠವಾದ ಸಾಹಿತ್ಯದ ನಿರ್ಮಾಣದಲ್ಲಿ ಕಾಲ ದೇಶದ ವಾತಾವರಣವು ಎಷ್ಟು ಸಹಾಯಕವಾಗಿ ನಿಲ್ಲುತ್ತದೆ, ಎಷ್ಟು ಉತ್ತೇಜಕವಾಗಿ ಕೂಡಿಬರುತ್ತದೆ, ಎಂಬುದನ್ನು ಇಲ್ಲಿ ವಿವರಿಸುವುದು ಅಗತ್ಯವಿಲ್ಲ. ನೃಪತುಂಗನು ತನ್ನ ರಾಜಧಾನಿಯಾದ ಮಾನ್ಯಖೇಟದಲ್ಲಿ ಸಕಲ ವಿದ್ವಜ್ಜನರಿಗೆ ಆಶ್ರಯವನ್ನಿತ್ತು, ಅವರಿಂದ ವಿದ್ಯಾಜ್ಞಾನಪ್ರಸಾರವನ್ನುಂಟುಮಾಡಿ ಕನ್ನಡ ಸಾಹಿತ್ಯದ ಪಂಚಾಂಗವನ್ನು ಕಟ್ಟಿಕೊಂಡನು. ಆ ಕಾಲದಲ್ಲಿ ನಡೆದ ಪುನಃ ವಿದ್ಯಾಸಂಜೀವನದ ಮತ್ತು ಜ್ಞಾನಪ್ರಸಾರದ ಕಾರಣದಿಂದಾಗಿಯೇ ಅಂದಿನ ವರೆಗೆ ತೋರಿ ಬಾರದ, ಅಂದಿನ ವರೆಗೆ ಹರಿದು ಬಂದಿರದ ಉತ್ಸಾಹವು ಕನ್ನಡ ಜನಾಂಗದ, ಕನ್ನಡ ದೇಶದ ಧಮನಿಗಳಲ್ಲಿ ಬುಗ್ಗೆಬುಗ್ಗೆಯಾಗಿ ಪ್ರವಹಿಸಲು ಪ್ರಾರಂಭವಾಯಿತು. ಆ ಕಾಲದ ಪುನಃ ವಿದ್ಯಾಸಂಜೀವನದ ಆ ಹುರುಪು, ಆ ವ್ಯಕ್ತಿತ್ವ, ಆ ಗಾಂಭೀರ್ಯ ಮುಂದೆ ಪಂಪರನ್ನಾದಿಗಳನ್ನು ಸೃಷ್ಟಿಸಿತು. ಆ ಪಂಪರನ್ನಾದಿಗಳಿಂದ ಕನ್ನಡ ಸಾಹಿತ್ಯವು ಬೆಳಗಿತು, ಕನ್ನಡಿಗರ ಜೀವನದಿಂದ ಅಂಧಕಾರವು ನಿಶ್ಶೇಷವಾಗಿ ಅಡಗಿ ಹೋಯಿತು. ಇಂತಹ ಪುನಃವಿದ್ಯಾಸಂಜೀವನಗಳು ಕಾಲದಿಂದ ಕಾಲಕ್ಕೆ ಸಂಭವಿಸಿ ನಿರುತ್ಸಾಹವಾಗಿ ಹೋಗಿ ಸಂಕುಚಿತವಾದ ಜೀವನವನ್ನು ನಡೆಸುತ್ತಿದ್ದ ಜನರನ್ನು ಪ್ರಚೋದಿಸಿರಬಹುದು; ಆದರೆ ನೃಪತುಂಗನ ಕಾಲದ ಈ ಸಂಜೀವನವು ಪ್ರಾಯಃ ಮೊದಲನೆಯದಾಗಿದ್ದು ಕನ್ನಡ ಜನಾಂಗದ ಸಾಹಿತ್ಯಸಾಗರವನ್ನು ಮೊದಲನೆಯ ಬಾರಿಗೆ ಮಥಿಸಿರಬೇಕೆಂದು ಊಹಿಸಬಹುದಾಗಿದೆ.

ನೃಪತುಂಗನ ಕಾಲದ ಈ ಪುನಃವಿದ್ಯಾಸಂಜೀವನದಲ್ಲಿ ಮುಖ್ಯವಾದ ಭಾಗವನ್ನು ವಹಿಸಿದವರಲ್ಲಿ ಜಿನಸೇನಾಚಾರ್ಯರ ಪವಿತ್ರವಾದ ಹೆಸರು ಅಚ್ಚಳಿಯದೆ ನಿಂತು ಬಂದಿದೆ. ಜಿನಸೇನಾಚಾರ್ಯರಿಗಿಂತ ಹಿಂದೆ ಜೈನ ಪುರಾಣಗಳನ್ನು ಕೂಚಿಭಟ್ಟಾರಕರೇ ಮೊದಲಾದವರು ಸಂಸ್ಕೃತ ಭಾಷೆಯಲ್ಲಿ ವಿರಚಿಸಿದ್ದಿರಬಹುದು. ಆದರೆ, ಆ ಗ್ರಂಥಗಳೆಲ್ಲ ಇಂದಿನ ದಿವಸ ಉಪಲಬ್ಧವಾಗಿ ಬಂದಿಲ್ಲ. ಆ ಗ್ರಂಥಗಳೆಲ್ಲವೂ ಮರೆವೆಯ ಪಾಲಿಗೆ ಬಲಿಬಿದ್ದಿರುತ್ತವೆ. ಆಚಾರ್ಯ ಜಿನಸೇನರು "ಪುರಾಣಂ ಸಂಗ್ರಹಿಷ್ಯಾಮಿ

ತ್ರಿಷಷ್ಟಿಪುರುಷಾಶ್ರಿತಂ" ಎಂಬುದಾಗಿ ಪರಂಪರೆಯಿಂದ ಬಂದ ಪುರಾಣದ ಲಬ್ಧಭಾಗವನ್ನು ಸಂಗ್ರಹಿಸಿ ಬರೆದಿಟ್ಟರು. ಆದರೆ ಜಿನಸೇನಾಚಾರ್ಯರಿಗೆ ತಾವು ಪ್ರಾರಂಭ ಮಾಡಿದಂತಹ ಗ್ರಂಥವನ್ನು ಮುಗಿಸಲಿಕ್ಕೆ ಸಾಧ್ಯವಾಗಲಿಲ್ಲ. ನಾಲ್ವತ್ತೆರಡು ಪರ್ವಗಳನ್ನು ಬರೆದು ನಾಲ್ವತ್ತಮೂರನೆಯ ಪರ್ವದಲ್ಲಿ ಮೂರು ಶ್ಲೋಕಗಳನ್ನು ಬರೆದು ಮುಗಿಸಿದಷ್ಟಕ್ಕೆ ಆಚಾರ್ಯರು ಸ್ವರ್ಗಸ್ಥರಾದರು. ಬಳಿಕ ಅವರ ಸಚ್ಛಿಷ್ಯರಾದಂತಹ ಗುಣಭದ್ರಾಚಾರ್ಯರು ತಮ್ಮ ಗುರುಗಳ ಕೃತಿಯನ್ನು ನಾಲ್ವತ್ತೇಳನೆಯ ಪರ್ವಕ್ಕೆ ಸಂಪೂರ್ಣ ಮಾಡಿ ತಂದರು. ಈ ಗ್ರಂಥಕ್ಕೆ ಆದಿಪುರಾಣವೆಂದು ಹೆಸರು; ಈ ಗ್ರಂಥದಲ್ಲಿ ಪ್ರಥಮ ತೀರ್ಥಂಕರ ಆದಿನಾಥನ ಮತ್ತು ಪ್ರಥಮ ಚಕ್ರವರ್ತಿ ಭರತನ ಚರಿತ್ರೆಯು ವರ್ಣಿಸಲ್ಪಟ್ಟಿದೆ. ಅನಂತರ ಉಳಿದ ಇಪ್ಪತ್ತಮೂರು ತೀರ್ಥಂಕರರು, ಉಳಿದ ಹನ್ನೊಂದು ಚಕ್ರವರ್ತಿಗಳು, ಒಂಬತ್ತು ಬಲದೇವರು, ಒಂಬತ್ತು ವಾಸುದೇವರು, ಒಂಬತ್ತು ಪ್ರತಿವಾಸುದೇವರು, ಎಂದು ಇವರ ಚರಿತ್ರೆಯು ಉತ್ತರ ಪುರಾಣವಾಗಿ ರಚಿಸಲ್ಪಟ್ಟಿತು. ಹೀಗೆ ಈ ಅರುವತ್ತುಮೂರು ಶಲಾಕಾ ಪುರುಷರ ಚರಿತ್ರೆಗೆ ಜೈನ ಮಹಾಪುರಾಣವೆಂದು ಪ್ರಸಿದ್ಧಿಯಿರುತ್ತದೆ.

ಜಿನಸೇನಾಚಾರ್ಯರೂ ಗುಣಭದ್ರಾಚಾರ್ಯರೂ ರಚಿಸಿದಂತಹ ಈ ಮಹಾಪುರಾಣವು ಸಂಸ್ಕೃತ ಭಾಷೆಯಲ್ಲಿದ್ದರೂ ಅದರ ಪಠನ ಪಾಠನವು ಕರ್ಣಾಟಕ ದೇಶದಲ್ಲೆಲ್ಲಾ ಪ್ರಚುರವಾಗಿ ಜನರಲ್ಲಿ ಜಿಜ್ಞಾಸೆಯು ಹೆಚ್ಚಾಗಿ, ಕಾವ್ಯರಸಾಸ್ವಾದನವು ಉಚ್ಚಾಂಶವೇರಿ ಒಂದು ತರಹದ ಸ್ವರ್ಣಯುಗವು ಉಂಟಾಗಿ ಹೊಸ ಕವಿತಾಝುರಿಯೊಂದು ಚಿಮ್ಮಿ ಬಂದಿತು. ಅನಂತರದ ಜೈನ ಕವಿಗಳೆಲ್ಲರೂ ಕಾವ್ಯವಸ್ತುವೆಲ್ಲವನ್ನೂ ಈ ಮಹಾಪುರಾಣದಿಂದಲೇ ಆಯ್ದುಕೊಂಡು ಬಂದರು. ಪ್ರತಿಯೊಬ್ಬ ಜೈನ ಕವಿಯೂ ಈ ಇಬ್ಬರು ಆಚಾರ್ಯರಿಗೆ ತಾವೆಷ್ಟು ಋಣಿಗಳೆಂದು ಮುಕ್ತಕಂಠರಾಗಿ ಹಾಡಿರುತ್ತಾರೆ. ಜೈನರಿಗೆ ಪರಮ ಪವಿತ್ರವಾದ ಈ ಗ್ರಂಥವು ನೃಪತುಂಗನ ಕಾಲದಲ್ಲಿ ಜನರಿಗೊಂದು ಜ್ಯೋತಿಯನ್ನು ಉರಿಸಿಕೊಟ್ಟಿತು. ಆ ಜ್ಯೋತಿಯಿಂದಲೇ ಮತ್ತೆ ಪಂಪರನ್ನಾದಿ ಕನ್ನಡದ ಜ್ಯೋತಿಗಳು

ಹುಟ್ಟಿಬಂದುವು. ಕಿಡಿಯೊಂದು ಅಲ್ಪ ಕಾಲದಲ್ಲಿಯೇ ಬುಗ್ಗೆಂದು ಜ್ಯೋತಿಯಾಗಿ ಬಿಟ್ಟಿತು.

ಮಾನ್ಯಖೇಟದಲ್ಲಿಯೂ ರಾಷ್ಟ್ರಕೂಟರ ಕೈಕೆಳಗಿದ್ದ ಅಖಂಡ ಕರ್ಣಾಟಕದಲ್ಲಿಯೂ ಈ ಪುನಃ ವಿದ್ಯಾಸಂಜೀವನವನ್ನು ಉಂಟುಮಾಡಿದ ಜಿನಸೇನಾಚಾರ್ಯರೂ ಗುಣಭದ್ರಾಚಾರ್ಯರೂ ಪವಿತ್ರವಾದ ಜೀವನವನ್ನು ನಡೆಸಿ ಪ್ರಾತಃಸ್ಮರಣೀಯರಾಗಿದ್ದರು. ಜಿನಸೇನಾಚಾರ್ಯರು ನೃಪತುಂಗನ ರಾಜಗುರುಗಳಾಗಿದ್ದರು. ಅವರ ಜೀವನವು ಪರಮಪಾವನವಾಗಿತ್ತು. ಅವರು ಪ್ರಾಯಃ ಕನ್ನಡಿಗರಾಗಿರಬೇಕೆಂದು ಕೆಲವರ ಊಹೆಯಾಗಿದೆ. ಹಾಗಿದ್ದರೆ, ಅದೊಂದು ಕನ್ನಡಿಗರಿಗೆ ಅಭಿಮಾನವೇ ಆಗಿರುತ್ತದೆ. ಜಿನಸೇನಾಚಾರ್ಯರು ಕರ್ಣಾಟಕದಲ್ಲಿಯೂ ಮಹಾರಾಷ್ಟ್ರದಲ್ಲಿಯೂ ತಮ್ಮ ಕಾರ್ಯಕ್ಷೇತ್ರವನ್ನು ವಿಸ್ತರಿಸಿಕೊಂಡು ಜೈನಾಗಮದ ಪ್ರಕಾರ ಜ್ಞಾನಸಂಪತ್ತೆಲ್ಲವನ್ನೂ ಮಹಾಪುರಾಣದಲ್ಲಿ ಸುರಿದು ಅದರ ಅಮೃತಪಾನವನ್ನು ಆ ಕಾಲದವರು ಮಾಡುವಂತೆ ವ್ಯವಸ್ಥೆಗಳನ್ನು ಮಾಡಿಕೊಟ್ಟು ಕನ್ನಡದ ಸಾಹಿತ್ಯಕ್ಕೆ ರಾಜಮಾರ್ಗವನ್ನು ಕಲ್ಪಿಸಿ ಕೊಟ್ಟರು. ಆ ರಾಜಮಾರ್ಗವೇ ನೃಪತುಂಗನ ಶ್ವೇತಚ್ಛತ್ರದ ಆಶ್ರಯದಲ್ಲಿ ಮುಂದಕ್ಕೆ ಸಾಗಿ ಆ ಕಾವೇರಿಯಿಂದ ಗೋದಾವರಿಯ ತನಕ ನಾಡನ್ನೆಲ್ಲ ಒಂದಾಗಿ ಮಾಡಿತು; ಆ ರಾಜಮಾರ್ಗವೇ ಕಂಟಕಾವೃತವಾದ ಸಂಸಾರದಲ್ಲಿ ನುಣ್ಣನೆಯ ಹಾದಿಯನ್ನು ಬಿಡಿಸಿ ಕೊಟ್ಟಿತು.

---

# ಜೈನ ಪುರಾಣಗಳು

ಸಮಸ್ತ ಜೈನ ಜ್ಞಾನದ ಸಂಪತ್ತು ಅಡಕವಾದ ಮಹಾಪುರಾಣವು ರಾಷ್ಟ್ರಕೂಟರ ಕಾಲದ ಜಿನಸೇನಾಚಾರ್ಯರಿಂದ ಸಂಗ್ರಹಿಸಲ್ಪಟ್ಟು, ಅನಂತರ ಆ ಮಹಾಪುರಾಣದ ಪಠನಪಾಠನವು ಕರ್ಣಾಟಕದಲ್ಲಿ ಪುನಃ ವಿದ್ಯಾಸಂಜೀವನವನ್ನು ಉಂಟುಮಾಡಿತು. ಆ ಪುರಾಣವು ಅವಸರ್ಪಿಣೀ ಕಾಲದ ಮೊದಲಿಂದಲೂ ಜಿಜ್ಞಾಸುಗಳಿಗೆ ಜ್ಞಾನಾಮೃತವನ್ನು ಕೊಟ್ಟು, ಅದರ ತೃಷ್ಣೆಯನ್ನು ತಣಿಸಿರುತ್ತದೆ. ಪ್ರಥಮ ಚಕ್ರವರ್ತಿ ಭರತೇಶನಿಂದ ಶ್ರೇಣಿಕ ಮಹಾರಾಜನ ವರೆಗಿನ ಜಿಜ್ಞಾಸುಗಳ ಮಹಾಪುಣ್ಯದಿಂದ ಜಗತ್ತಿಗೆ ಪ್ರಕಟವಾದ ಮಹಾ ಪುರಾಣವು ಕಾಲದಿಂದ ಕಾಲಕ್ಕೆ ಜ್ಞಾನದ ಪ್ರಚೋದನೆಯನ್ನು ಮಾಡಿ ಜನರು ಮುಕ್ತಿಯ ಸಾಧನದಲ್ಲಿ ಉದ್ಯುಕ್ತ ರಾಗುವಂತೆ ಮಾಡಿಟ್ಟಿತು. ಅಂತಹ ಮಹಾಪುರಾಣವು ಶ್ರೇಣಿಕ ಮಹಾರಾಜನ ಕಾಲದಿಂದ ಜನರ ದುರ್ಭಾಗ್ಯದಿಂದ ಶಿಲವಾಗುತ್ತ ಬಂದಿತು; ಶಿಲವಾಗಿ ಜಿನಸೇನಾಚಾರ್ಯರ ಕಾಲಕ್ಕೆ ಬಹು ಕಡಮೆಯಾಗಿ ಬಂದು ನಿಂತಿತು. ಆಗ ತಾನೆ ಪರಂಪರೆಯಾಗಿ ಬಂದ ಪುರಾಣವು ಪುಸ್ತಕರೂಪ ವಾಗಿ ಗ್ರಥಿಸಲ್ಪಟ್ಟಿತು.

ಜೈನರಿಗೆ ಪರಮ ಪೂಜ್ಯವಾದ ಈ ಮಹಾಪುರಾಣದಲ್ಲಿ ಅರುವತ್ತ ಮೂವರು ಶಲಾಕಾ ಪುರುಷರ ಚರಿತ್ರೆಗಳು ವಿವರಿಸಲ್ಪಟ್ಟಿವೆ. ಆಯಾ ಕಾಲದಲ್ಲಿ ಆಗಿ ಹೋದ ಇಪ್ಪತ್ತನಾಲ್ಕು ತೀರ್ಥಂಕರರು, ಹನ್ನೆರಡು ಚಕ್ರವರ್ತಿಗಳು, ಒಂಬತ್ತು ಬಲದೇವರು, ಒಂಬತ್ತು ವಾಸುದೇವರು ಮತ್ತು ಒಂಬತ್ತು ಪ್ರತಿವಾಸುದೇವರು ಎಂದು ಕೂಡಿ ಈ ಅರುವತ್ತು ಮೂವರಿಗೆ ತ್ರಿಷಷ್ಟಿ ಶಲಾಕಾಪುರುಷರೆನ್ನುತ್ತಾರೆ. ತೀರ್ಥಂಕರರು ಮುಕ್ತಿ ಹೊಂದಿ ಜೈನ ಧರ್ಮವನ್ನು ಜನರಿಗೆ ಉಪದೇಶ ಮಾಡಿದವರು. ಚಕ್ರ ವರ್ತಿಗಳು ಷಟ್ಖಂಡ ಭೂಮಿಗೆ ಒಡೆಯರಾದವರು. ಮೂರು ಖಂಡಗಳ ಒಡೆಯರಾದ ವಾಸುದೇವರು ಅರ್ಧಚಕ್ರಿಗಳು; ಕಾರಣ ಅವರು ಚಕ್ರದ ಅರ್ಧ ಎಂದರೆ, ಮೂರು ಖಂಡಗಳ ಒಡೆಯರು. ಅವರಣ್ಣಂದಿರು ಬಲ

ದೇವರು. ಈ ಅಣ್ಣತಮ್ಮಂದಿರ ವಿರೋಧಿಗಳು ಪ್ರತಿವಾಸುದೇವರು, ಅಥವಾ ಪ್ರತಿನಾರಾಯಣರು.

ಈ ಮಹಾ ಪುರಾಣದಲ್ಲಿ ತೀರ್ಥಂಕರರೆಲ್ಲರ ಭವಾವಳಿಯನ್ನು ವಿವರಿಸಿರುತ್ತದೆ. ತೀರ್ಥಂಕರನ ಜೀವನವು ತಾನು ತೀರ್ಥಂಕರನಾಗುವ ಕಾಲವನ್ನು ಕಾಯುತ್ತ ಸ್ವರ್ಗದಲ್ಲಿರುವುದನ್ನು ಮೊದಲು ಮಾಡಿ ತೀರ್ಥಂಕರನು ಧರ್ಮೋಪದೇಶವನ್ನು ಮಾಡುವ ವರೆಗಿನ ಕತೆಯು ವಿಸ್ತರಿಸಲ್ಪಟ್ಟಿದೆ. ಚಕ್ರವರ್ತಿಗಳು ಗೆದ್ದ ಷಟ್ಖಂಡಗಳನ್ನು ಸೂಚಿಸುತ್ತ ಅವರ ಐಶ್ವರ್ಯ, ಅವರಲ್ಲಿರತಕ್ಕ ನವನಿಧಿ, ಚತುರ್ದಶ ರತ್ನಗಳು, ಸಪ್ತಾಂಗ, ದಶಾಂಗ ಭೋಗ ಮತ್ತು ಚತುರಂಗ ಸೇನೆ—ಇವುಗಳ ವರ್ಣನೆಯನ್ನು ಕೊಟ್ಟಿರುತ್ತದೆ. ವಾಸುದೇವ ಪ್ರತಿವಾಸುದೇವರ ಹೋರಾಟವೂ ಅವರಲ್ಲಿ ವಾಸುದೇವರ ವಿಜಯವೂ ವರ್ಣಿಸಿರುತ್ತದೆ. ಹೀಗೆ ಮಹಾಪುರಾಣದಲ್ಲಿ ಧರ್ಮಸ್ವರೂಪವೂ ಸಂಪತ್ಸ್ವರೂಪವೂ ಸಂಸಾರಸ್ವರೂಪವೂ ವಿವರಿಸಲ್ಪಟ್ಟಿರುತ್ತದೆ.

ಶ್ರೀ ಜಿನಸೇನಾಚಾರ್ಯರು ಸಂಸ್ಕೃತದಲ್ಲಿ ರಚಿಸಿದ ಮಹಾಪುರಾಣವನ್ನು ಚಾವುಂಡರಾಯನು ಕನ್ನಡದಲ್ಲಿ ರಚಿಸಿರುವನು. ಈ ಚಾವುಂಡರಾಯ ಪುರಾಣವು ಸಂಪೂರ್ಣವಾಗಿ ಇನ್ನೂ ಪ್ರಕಟವಾಗಿಲ್ಲ. ಚಾವುಂಡರಾಯನ ಪುರಾಣವೇ ಅನಂತರದ ಜೈನ ಕವಿಗಳಿಗೆ ಬರೆಯುವ ಪ್ರಚೋದನೆಯನ್ನು ಮಾಡಿದಂತೆಯೇ ಜಿನಸೇನಾಚಾರ್ಯರ ಪುರಾಣವೇ ಚಾವುಂಡರಾಯನ ಪುರಾಣಕ್ಕೆ ಆಧಾರವಾಗಿದೆ.

ಈ ಮಹಾ ಪುರಾಣದ ಗನಿಯಿಂದ ಹನ್ನೆರಡು ಪುರಾಣ ರತ್ನಗಳನ್ನು ಕನ್ನಡದ ಪಂಪರನ್ನಾದಿ ಕವಿಗಳು ಹೆಕ್ಕಿ ತಂದರು. ಇಪ್ಪತ್ತನಾಲ್ಕು ತೀರ್ಥಂಕರರಲ್ಲಿ ಹನ್ನೆರಡು ತೀರ್ಥಂಕರರ ಪುರಾಣಗಳನ್ನು ಮಾತ್ರ ಕನ್ನಡ ಕವಿಗಳು ಬರೆದಿಟ್ಟರು. ಪಂಪನ ಆದಿಪುರಾಣದಲ್ಲಿ ಪ್ರಥಮ ತೀರ್ಥಂಕರ ಋಷಭೇಶ್ವರನ ಭವಾವಳಿಯೂ ಪಂಚಕಲ್ಯಾಣವೂ ಸುಂದರವಾಗಿ ಚಿತ್ರಿತವಾಗಿದೆ. ನಾಗಚಂದ್ರನ ಪಂಪರಾಮಾಯಣದಲ್ಲಿ ವಾಸುದೇವ ಪ್ರತಿವಾಸುದೇವರ ಪರಸ್ಪರ ವಿರೋಧವು ಅಂಕಿಸಲ್ಪಟ್ಟಿದೆ. ಈ ಗ್ರಂಥಗಳೆಲ್ಲವೂ ಕಾವ್ಯಲಕ್ಷಣಗಳಿಂದೆಲ್ಲ ಕೂಡಿಕೊಂಡು ಬಹಳ ಬಳೆದು ಬಂದು ಮಹಾ ಗ್ರಂಥಗಳಾಗಿವೆ.

## ೨೪ ತೀರ್ಥಂಕರರು, ೧೨ ಚಕ್ರವರ್ತಿ, ೯ ಬಲದೇವ, ೯ ವಾಸುದೇವ ಮತ್ತು ೯ ಪ್ರತಿವಾಸುದೇವರು

| ತೀರ್ಥಂಕರರು | ಚಕ್ರವರ್ತಿಗಳು | ಬಲದೇವ | ವಾಸುದೇವ | ಪ್ರತಿವಾಸುದೇವ |
|---|---|---|---|---|
| 1 ಋಷಭ | 1 ಭರತ | | | |
| 2 ಅಜಿತ | 2 ಸಗರ | | | |
| 3 ಶಂಭವ | | | | |
| 4 ಅಭಿನಂದನ | | | | |
| 5 ಸುಮತಿ | | | | |
| 6 ಪದ್ಮಪ್ರಭ | | | | |
| 7 ಸುಪಾರ್ಶ್ವ | | | | |
| 8 ಚಂದ್ರಪ್ರಭ | | | | |
| 9 ಪುಷ್ಪದಂತ | | | | |
| 10 ಶೀತಳ | | | | |
| 11 ಶ್ರೇಯಾನ್ | | 1 ವಿಜಯ | 1 ತ್ರಿಪಿಷ್ಟ | 1 ಅಶ್ವಗ್ರೀವ |
| 12 ವಾಸುಪೂಜ್ಯ | | 2 ಅಚಲ | 2 ದ್ವಿಪಿಷ್ಟ | 2 ತಾರಕ |
| 13 ವಿಮಲ | | 3 ಸುಧರ್ಮ | 3 ಸ್ವಯಂಭು | 3 ಮೇರಕ |
| 14 ಅನಂತ | | 4 ಸುಪ್ರಭ | 4 ಪುರುಷೋತ್ತಮ | 4 ನಿಶುಂಭ |
| 15 ಧರ್ಮ | 3 ಮಘವ | | | |
| | 4 ಸನತ್ಕುಮಾರ | 5 ಸುದರ್ಶನ | 5 ಪುರುಷಸಿಂಹ | 5 ಮಧುಕೈಟಭ |
| 16 ಶಾಂತಿ | 5 ಶಾಂತಿನಾಥ | | | |
| 17 ಕುಂಥು | 6 ಕುಂಥುನಾಥ | | | |
| 18 ಅರ | 7 ಅರನಾಥ | | | |
| | 8 ಸುಭೌಮ | 6 ನಂದಿಷೇಣ | 6 ಪುಂಡರೀಕ | 6 ಬಲಿ |
| 19 ಮಲ್ಲಿ | 9 ಪದ್ಮ | 7 ನಂದಿಮಿತ್ರ | 7 ದತ್ತ | 7 ಪ್ರಹರಣ |
| 20 ಮುನಿಸುವ್ರತ | 10 ಹರಿಷೇಣ | 8 ರಾಮ | 8 ಲಕ್ಷ್ಮಣ | 8 ರಾವಣ |
| 21 ನಮಿ | 11 ಜಯಸೇನ | | | |
| 22 ನೇಮಿ | 12 ಬ್ರಹ್ಮದತ್ತ | 9 ಬಲರಾಮ | 9 ಕೃಷ್ಣ | 9 ಜರಾಸಂಧ |
| 23 ಪಾರ್ಶ್ವ | | | | |
| 24 ಮಹಾವೀರ | | | | |

# ಶ್ರೇಣಿಕನ ಅಂತಿಮ ಕಾಲ

ಶಾಂತಿಭಾವದಲ್ಲಿ ಜೀವನವನ್ನು ಸಾಗಿಸಲೆಂದು, ಶ್ರೇಣಿಕನು ತನ್ನ ರಾಜ್ಯವನ್ನು ತ್ಯಜಿಸಿದನು. ಧರ್ಮಸೇವೆಯಾಗಬೇಕು, ತನ್ನ ಚಿಂತಾವಿನಾಶ ವಾಗಬೇಕು ಎಂದು ಶ್ರೇಣಿಕನು ತನ್ನ ರಾಜ್ಯವನ್ನು ಮಗನಿಗೆ ಒಪ್ಪಿಸಿದನು. ತನ್ನ ಸಾಮಂತ ರಾಜರ ಸಮ್ಮುಖದಲ್ಲಿ ತನ್ನ ಪ್ರೀತಿಯ ಮಗನನ್ನು— ಕುಣಿಕನನ್ನು ಸಿಂಹಾಸನಾರೋಪಣ ಮಾಡಿಸಿದನು.

ಕುಣಿಕನು ರಾಜನಾಗಿ ಮೆರೆಯುತ್ತಿದ್ದನು. ಸುಖಲೋಲುಪನಾಗಿ ಕಾಲವನ್ನು ಕಳೆಯುತ್ತಿದ್ದನು. ಒಮ್ಮೆಲೇ ಆತನಿಗೆ ಪೂರ್ವಜನ್ಮದ ಸ್ಮರಣೆ ಯೊಂದುಂಟಾಯಿತು. ತನ್ನ ತಂದೆ ಶ್ರೇಣಿಕನು ತನ್ನ ವೈರಿಯೆಂದು ಆತನಿಗೆ ಭಾವನೆ ಉಂಟಾಯಿತು. ಮುಳ್ಳಿನ ಪಂಜರವೊಂದನ್ನು ಸಿದ್ಧಪಡಿಸಿ, ತಂದೆ ಯನ್ನು ಅದರಲ್ಲಿ ಬಂಧಿಸಿದನು. ಕುಣಿಕನ ಈ ದುಷ್ಟ ವರ್ತನೆಯನ್ನು ಕಂಡು ಆತನ ತಾಯಿ, ಚೇಳಿನೀದೇವಿ ಮರುಕಗೊಂಡಳು. ಗಂಡನಿಗೊದ ಗಿದ ಅವಸ್ಥೆಯನ್ನು ಕಂಡು ಬಹಳವಾಗಿ ಮರುಗಿದಳು. ಆದರೆ ಫಲ ವೇನು? ಪಾಪಿಯಾದ ಕುಣಿಕನು ತಾಯಿಯ ಗೋಳಿಗೆ ಕಿವಿ ಕೊಡಲಾರನು. ತಂದೆಯಿದ್ದಲ್ಲಿ, ಮುಳ್ಳಿನ ಪಂಜರದಲ್ಲಿ ತಂದೆ ಅಸಹನೀಯವಾದ ಯಾತನೆ ಯನ್ನು ಪಡಯುವಲ್ಲಿಗೆ ಪ್ರತಿದಿನವೂ ದುಷ್ಟನಾದ ಕುಣಿಕನು ನಡೆದು, ಮರ್ಮಭೇದಿ ವಚನಗಳಿಂದ ತಂದೆಯನ್ನು ಜರೆದು, ಕೊಳೆತ ಆಹಾರ ವನ್ನು ಆತನಿಗೆ ಕೊಡಿಸುತಿದ್ದನು. ಆತನು ಆ ಅನ್ನವನ್ನು ಉಣ್ಣುವಾಗ, ನಿಷ್ಠುರವಾದ ಮಾತುಗಳನ್ನಾಡಿ, ಆತನು ಉಣ್ಣದಂತೆಯೂ ಮಾಡು ತ್ತಿದ್ದನು. ಇದೆಲ್ಲವೂ ತನ್ನ ಪೂರ್ವಸಂಚಿತ ಕರ್ಮವೆಂದೇ ಎಲ್ಲ ಕಷ್ಟ ವನ್ನು ಮೌನದಿಂದ ಅನುಭವಿಸಿ, ಶ್ರೇಣಿಕನು ತನ್ನ ಮನಃಸಮಾಧಾನವನ್ನು ಮಾಡುತ್ತಿದ್ದನು.

ಒಂದು ದಿನ ಆ ಪಾಪಿ ಕುಣಿಕ ಮಹಾರಾಜನು ಲೋಕಪಾಲನೆಂಬ ತನ್ನ ಪ್ರೇಮದ ಪುತ್ರನೊಡನೆ ಊಟ ಮಾಡುತ್ತಿದ್ದನು. ಬಾಲಕನು ಕುಣಿಕನ ಬಟ್ಟಲಲ್ಲಿ ಮೂತ್ರಿಸಿದನು. ಆದರೆ ಕುಣಿಕನು ಅದನ್ನು

ಲೆಕ್ಕಿಸದೆ ಪುತ್ರಮೋಹದಿಂದ ಅದರಲ್ಲೇ ಸಾನಂದದಿಂದ ಭೋಜನ ಮಾಡಿದನು. ತನ್ನ ಮಗನನ್ನು ಎಡಗೈಯಿಂದ ಸವರುತ್ತಾ ತನ್ನ ತಾಯಿಯಾದ ಚೇಳಿನಿಯೊಡನೆ "ಅಮ್ಮಾ, ಈ ಪೃಥ್ವಿಯಲ್ಲಿ ನನ್ನಷ್ಟು ಪುತ್ರಮೋಹದಿಂದ ಕೂಡಿದ ಒಂದು ವ್ಯಕ್ತಿಯಾದರೂ ಇರುವನೇ?" ಎಂದನು.

ಚೇಳಿನಿಯು "ರಾಜನೇ! ನಿನ್ನ ಪುತ್ರನಲ್ಲಿ ಮಾತ್ರ ನಿನಗೆ ಅಧಿಕ ಮೋಹವೇನು? ತಂದೆಗೆ ಮಕ್ಕಳ ಮೇಲೆ ಪ್ರೀತಿಯು ಎಲ್ಲಿಯೂ ಇದೇ ರೀತಿಯಾಗಿದೆ. ನೋಡು! ನಿನ್ನ ತಂದೆಯ ದೃಷ್ಟಾಂತವನ್ನು ಹೇಳುತ್ತೇನೆ. ನಿನ್ನ ತಂದೆಗೆ ಅಭಯಕುಮಾರಾದಿ ಅನೇಕ ಉತ್ತಮೋತ್ತಮ ಪುತ್ರರಿರುತ್ತಾ ಅವರಲ್ಲಾರಲ್ಲೂ ನಿನ್ನಲ್ಲಿದ್ದಷ್ಟು ಪ್ರೇಮವಾಗಲಿ ವಿಶ್ವಾಸವಾಗಲಿ ಇದ್ದಿಲ್ಲ. ಪ್ರಿಯ ಮಗನೇ! ನಿನ್ನಲ್ಲಿದ್ದ ಆ ಪುತ್ರಪ್ರೇಮವು ಹೇಗಿತ್ತು ಎಂಬುದನ್ನು ಹೇಳುತ್ತೇನೆ, ಕೇಳು. ಒಂದು ದಿನ ನಿನ್ನ ಕೈಯಲ್ಲಿ ಒಂದು ದೊಡ್ಡ ಕುರು ಎದ್ದಿತು. ಅದರಲ್ಲಿ ಕೀವು ತುಂಬಿತು. ನಿನಗೆ ಅದರ ನೋವನ್ನು ಸಹಿಸಲಿಕ್ಕಾಗದೆ ಕೂಗುತ್ತಾ ಅತ್ತಿತ್ತ ಹೊರಳಾಡುತ್ತಿದ್ದಿ. ಅದು ಅತ್ಯಂತ ದುರ್ಗಂಧಮಯವಾಗಿತ್ತು. ಅನೇಕ ತರಹದ ಔಷಧೋಪಚಾರಗಳು ನಡೆದುವು. ಯಾವುದೂ ಫಲಕಾರಿಯಾಗಲಿಲ್ಲ. ಆದರೆ ನೋಡು! ನಿನ್ನ ತಂದೆಯು ತನ್ನ ಬಾಯಿಯಿಂದ ಅದನ್ನು ನೆಕ್ಕಿ ನಿನ್ನ ವೇದನೆಯನ್ನು ಗುಣಪಡಿಸಿದನು."

ಚೇಳಿನಿಯು ಮುಂದುವರಿಸುತ್ತಾ "ನಿನ್ನ ತಂದೆಯು ನಿನಗೆ ರಾಜ್ಯವನ್ನು ಕೊಟ್ಟನು. ಜನ್ಮವಿತ್ತನು. ವಿದ್ಯಾಭ್ಯಾಸ ಮಾಡಿಸಿದನು. ಇದಕ್ಕೆ ನಿನ್ನಿಂದ ಅವನಿಗೆ ಸಿಕ್ಕಿದ ಪ್ರತಿಫಲವೇನು? ಈ ಕ್ರೂರ ಹಿಂಸೆಯು. ಇದನ್ನು ಲೋಕವು ಮೆಚ್ಚುವುದೇ? ಉತ್ತಮರು ತಮ್ಮ ತಂದೆಯನ್ನು ಪೂಜ್ಯಬುದ್ಧಿಯಿಂದ ನೋಡುವರು, ಪೂಜಿಸುವರು. ಆದರೆ ನೀನು ಮಾಡಿದುದಾದರೂ ಏನು? ಈ ನಿಕೃಷ್ಟ ಕೆಲಸ."

"ಉಪಕಾರಕ್ಕೆ ಇದು ಪ್ರತ್ಯುಪಕಾರವೇ? ಇದಕ್ಕೆ ಕೃತಜ್ಞತೆಯೆನ್ನುವುದೇ? ಪುತ್ರನು ತನ್ನ ಪ್ರೀತಿಯ ತಂದೆಗೆ ಮಾಡಿದ ಈ ಅನುಚಿತ ಕಾರ್ಯವನ್ನು ಮುಂದೆ ಲೋಕವು ಹೇಗೆ ಹೇಳುವುದು ಎಂಬುದನ್ನು

ಯೋಚಿಸು. ತಂದೆಯನ್ನು ಮುಳ್ಳಿನ ಪಂಜರದಲ್ಲಿಟ್ಟು ಅಸಹ್ಯ ಮಾತುಗಳನ್ನು ಪ್ರತಿ ದಿವಸವೂ ಅವನ ಮುಂದೆ ಆಡಿ ಅವನನ್ನು ದುಃಖಕ್ಕೀಡು ಮಾಡುತ್ತಿರುವೆ. ಸಾಕು. ಅವನ ಆ ಅದ್ವಿತೀಯ ಪುತ್ರವಾತ್ಸಲ್ಯಕ್ಕೆ ತಕ್ಕ ಉಪಕಾರವನ್ನೆಸಗಿದೆ. ನಿನ್ನ ಜನ್ಮಕ್ಕೆ ಧಿಕ್ಕಾರ!" ಎಂಬುದಾಗಿ ನುಡಿದಳು.

ಕುಣಿಕನು ತಾಯಿಯ ಮರ್ಮಭೇದಿ ವಚನಗಳನ್ನು ಕೇಳಿದನು, ಮರುಗಿದನು. ತನ್ನ ದುಷ್ಕರ್ಮವನ್ನು ಬಾರಿ ಬಾರಿ ತಾನೇ ನಿಂದಿಸಿಕೊಂಡು ಹೀಗೆ ವಿಚಾರಿಸಿದನು: "ನಾನೆಂಥ ಪಾಪಾತ್ಮನು! ಎಂಥಾ ನಿಂದ್ಯ ಕೆಲಸವನ್ನು ಮಾಡಿದೆನು! ನಾನು ಮಾಡಿದ ಈ ಪಾಪದಿಂದ ಹೇಗೆ ಮುಕ್ತನಾಗುವುದು? ನನ್ನ ಹಿತವನ್ನು ಬಯಸುವ ನನ್ನ ಪೂಜ್ಯ ತಂದೆಯನ್ನು ಈಗಲೇ ಹೋಗಿ ಆ ಮುಳ್ಳಿನ ಪಂಜರದಿಂದ ಬಿಡುಗಡೆ ಮಾಡುವೆನು."

ಕುಣಿಕನು ತನ್ನ ತಂದೆಯನ್ನು ಬಿಡಿಸಲಿಕ್ಕೆ ಬಂದನು. ಶ್ರೇಣಿಕನು ಕುಣಿಕನು ಬರುವುದನ್ನು ಕಂಡನು. ಶ್ರೇಣಿಕನು "ಈ ದುಷ್ಟನು ಈಗ ತಾನೆ ಪೀಡೆ ಕೊಟ್ಟು ಹೋದವನು ಈಗ ನನ್ನನ್ನು ಏನು ಮಾಡಲಿಕ್ಕಾಗಿ ಬರುತ್ತಿರುವನು? ನನಗೆ ಸಹಿಸಲಿಕ್ಕಾಗದ ಕಷ್ಟವನ್ನಿತ್ತು ಅದರಿಂದಲೂ ಅಧಿಕವಾದ ಕಷ್ಟವನ್ನು ಕೊಡಲಿಕ್ಕೆ ಬರುತ್ತಿರುವನೇ? ಅಯ್ಯೋ. ಈ ನಿರ್ದಯಿಯು ಕೊಡುತ್ತಿರುವ ಕಷ್ಟವನ್ನು ನಾನು ಇನ್ನು ಸಹಿಸುವಂತಿಲ್ಲ" ಎಂಬುದಾಗಿ ಯೋಚಿಸಿ ಆ ಮುಳ್ಳಿನ ಪಂಜರಕ್ಕೆ ಒರಗಿದನು. ಅಪರಿಮಿತವಾದ-ಚೂಪಾದ ಮುಳ್ಳಿನಿಂದ ಅವನ ಪ್ರಾಣವು ಹೋಯಿತು.

ಕುಣಿಕನು ಗಾಬರಿಯಿಂದ ಓಡಿ ಬಂದು ಶ್ರೇಣಿಕನನ್ನು ಮುಳ್ಳಿನ ಪಂಜರದಿಂದ ಬಿಡುಗಡೆ ಮಾಡಿದನು. ಅದರೆ ಶ್ರೇಣಿಕನು ಎಂದೋ ಇಹವನ್ನು ಬಿಟ್ಟಿದ್ದನು.

---

090664

# ಜೀವಿಸಿರಿ, ಇತರರು ಜೀವಿಸಲಿ

ಘೋರವಾದ ಅಶಾಂತಿಯು ಲೋಕದಲ್ಲಿ ಹರಡುತ್ತಿದೆ. ನಾಲ್ಕು ದಿಕ್ಕುಗಳಲ್ಲಿಯೂ ಎಲುಬುಗಳು ಪುಡಿಯಾಗುತ್ತಿವೆ, ರಕ್ತದ ನದಿಗಳು ಹರಿಯುತ್ತಿವೆ. ಮನುಷ್ಯನು ಯಾವುದು ತನಗೆ ಅಮೂಲ್ಯವಾದುದೆಂದು ಎಣಿಸಿದ್ದನೋ, ಯಾವುದು ಇಲ್ಲದೆ ತನ್ನ ಜೀವನವನ್ನು ನಡೆಸಿಯೂ ಸಾರ್ಥಕವಲ್ಲವೆಂದು ಬಗೆದಿದ್ದನೋ, ಅದು ಇಂದಿನ ದಿವಸ ಭೂಲೋಕ ದಿಂದ ಮಾಯವಾಗುತ್ತಿದೆ, ತುಳಿಯಲ್ಪಡುತ್ತಿದೆ, ಕಳಚಲ್ಪಡುತ್ತಿದೆ. ಯಾವ ದೊಂದು ಸಂಗತಿಯಿಂದ ಮನುಷ್ಯನ ಜೀವನವು ಹೇಯವಾಗುತ್ತಿದೆಯೋ, ದುಃಖಕ್ಕೀಡಾಗುತ್ತಿದೆಯೋ, ಆ ಒಂದು ಸಂಗತಿಯು ಜಗತ್ತಿನಲ್ಲಿ ದಿವಸ ದಿಂದ ದಿವಸಕ್ಕೆ ಬಲಗೊಳ್ಳುತ್ತಾ ಬಂದಿದೆ.

ಮನುಷ್ಯನ ಜೀವನದ ಧ್ಯೇಯವಾದ ಶಾಂತಿಯು, ಶಾಂತಿಯ ಪ್ರಯೋಜನಗಳು ಪುಡಿಯಾಗಿ ಹೋಗಿವೆ. ಅಜ್ಞಾನವೇ ಕಾರಣವಾದ ಲೋಭದ ಭಾವನೆಯಿಂದ ಆಶೆಗಳು ಬಳೆದು, ಕ್ರೌರ್ಯವು ಹುಟ್ಟಿ, ಮನುಷ್ಯನು ಶಾಂತಿಕಾಲದಲ್ಲಿ ಕಟ್ಟಿಕೊಂಡು ಬಂದ ತತ್ತ್ವಗಳು, ಪವಿತ್ರ ವಾದ ಧ್ಯೇಯಗಳು ಕಳಚಿ ಹೋಗುತ್ತಿವೆ. ಈ ಸರ್ವಂಕಷವಾದ ಸಂಹಾರದ ಚಿತ್ರವನ್ನು ಮನಸ್ಸಿನಲ್ಲಿ ನೆನೆಸಿದ ಮಾತ್ರಕ್ಕೆ ಹೃದಯವು ಕುಗ್ಗುತ್ತಿದೆ. ಆವರಿಸುವ ಈ ಅಜ್ಞಾನದ ಘೋರವಾದ ಕತ್ತಲೆಯನ್ನು ಜ್ಞಾನಮಯ ದೀಪದಿಂದ ಸಕಾಲದಲ್ಲಿ ಬೆಳಗಿಸದಿದ್ದರೆ, ಕಂಡುದೆಲ್ಲವೂ, ಕಟ್ಟಿದುದೆಲ್ಲವೂ, ಎಣಿಸಿದುದೆಲ್ಲವೂ ಲಯವಾಗಿ ನಾಳೆಯ ದಿವಸಕ್ಕೆ ಸದ್ಭಾವದ ಜೀವ ನವು ಅಶಕ್ಯವಾಗಬಹುದು, ಸದ್ಭಾವದ ಜೀವನವು ಕಂಟಕಿತವಾಗಬಹುದು.

ಇದೆಲ್ಲವೂ ಏತಕ್ಕೆ ಆಗುತ್ತಿದೆ?

ಎರಡು ಸಾವಿರದ ಆರುನೂರು ವರ್ಷಗಳ ಹಿಂದೆ ಭಗವಾನ್ ಮಹಾ ವೀರ ಸ್ವಾಮಿಯು ಮಾಡಿದ ದಿವ್ಯೋಪದೇಶವನ್ನು ನಾವು ಸ್ಮರಿಸುವುದು ಯೋಗ್ಯವಾಗಿದೆ. "ಜೀವಿಸಿರಿ, ಇತರರೂ ಜೀವಿಸುವಂತಾಗಲಿ" ಎಂಬ ಮಾತಿನಲ್ಲಿ ಅವರ ತತ್ತ್ವೋಪದೇಶದ ಸಂಪೂರ್ಣ ರಹಸ್ಯವು ಅಡಕ

ವಾಗಿದೆ. ಮನುಷ್ಯನು ತಾನು ಪವಿತ್ರ ಜೀವನ ಮಾರ್ಗದಲ್ಲಿ ಮುಂದು ವರಿದು ಹೋಗುವುದರಿಂದ, ಆತನ ಕಷ್ಟ ದುಃಖಗಳು ಮಿಂಚಿನಂತೆ ಮಾಯ ವಾಗುವುವು. ತನ್ನ ಜೀವನ ಮಾರ್ಗದಲ್ಲಿ ತನಗೆ ಲೋಭ ಮೋಹಗಳ ಅಜ್ಞಾನವು ಇಲ್ಲದಿದ್ದಲ್ಲಿ, ಆತನಿಂದ ಇತರರಿಗೆ ಎಷ್ಟು ಮಾತ್ರಕ್ಕೂ ಯಾವ ತೊಂದರೆಯೂ ಇಲ್ಲದೆ ಇತರರ ಜೀವನವು ಸುಗಮವಾಗುವುದು. ತನಗೆ ಚೆನ್ನಾಗಿ ಜೀವಿಸಲು ಸಾಧ್ಯವಾದಾಗ, ಇತರರ ಜೀವನಕ್ಕೆ ತನ್ನಿಂದಾವ ಬಾಧೆಯೂ ಇಲ್ಲದಿದ್ದಾಗ, ಪ್ರಪಂಚದಲ್ಲಿ ಸುಖ, ಶಾಂತಿ, ಪ್ರೇಮ, ಐಕ್ಯ, ಸೌಜನ್ಯ—ಇವುಗಳು ಸ್ಥಾಪನೆಯಾಗುವುವು. ದಯಾಪೂರಿತನಾದ ಭಗವಂತನ ಈ ದಿವ್ಯೋಪದೇಶವೇ ಜಗತ್ತಿನ ಶಾಂತಿಯ ಮಾರ್ಗವನ್ನು ತೋರಿಸುತ್ತಿದೆ. ಇಂದಿನ ರೋಗಕ್ಕೆ ಇದೇ ರಾಮಬಾಣದಂತಿದೆ. ಭಗ ವಂತನ ಈ ದಿವ್ಯೋಪದೇಶವನ್ನು ಮರೆತು ಜಗತ್ತಿನ ಜನರು ಸ್ವೇಚ್ಛಾ ಚಾರಿಗಳಾದ ಕಾರಣವೇ, ನಮಗೆ ಇಂದು ಈ ಆಪತ್ತು ಉಂಟಾಗಿದೆ.

ನಾವು ನಮ್ಮ ಸುಖವನ್ನು ಕುರಿತು ಆಲೋಚಿಸುತ್ತೇವೆ. ಸರ್ವದಾ ಸುಖಿಗಳಾಗಬೇಕೆಂದು ಬಯಸುತ್ತೇವೆ. ಅದಕ್ಕಾಗಿ ಪ್ರಯತ್ನಿಸುತ್ತೇವೆ. ಆದರೆ, ನಾವು ಪಡಬೇಕೆಂದಿರುವ ಸುಖವು, ಪ್ರಪಂಚದ ಇತರ ಜನರ, ಇತರ ಪ್ರಾಣಿಗಳ ಸುಖವನ್ನು ಹೊಂದಿಕೊಂಡಿದೆ ಎಂಬುದನ್ನು ಮರೆ ತಿದ್ದೇವೆ. ನೆರೆಯವನು ದುಃಖದಲ್ಲಿರುವಾಗ ನಾವು ಸುಖಪಡುವುದು, ಸುಖವಲ್ಲ. ನೆರೆಯವನು ಬಳಲುವಂತೆ ಮಾಡಿ, ಸುಖದಿಂದ ಉಣ್ಣು ವವನು, ಸುಖಿಯಾಗಲಾರನು. ಎಲ್ಲರೂ ಸುಖಪಡಬೇಕು, ಆಗ ತಾನು ಸುಖಪಡುವೆನು, ಎಂಬುದು ಎಷ್ಟರ ತನಕ ಜನರಲ್ಲಿ ಮೂಡು ವುದಿಲ್ಲವೋ ಅಷ್ಟರ ತನಕ ಜಗತ್ತು ದುಃಖಭೂಮಿಯಾಗಿ ಉಳಿಯು ವುದು. ಈ ಸ್ವಾರ್ಥದ ಅಂಧತೆಯೇ ಪ್ರಪಂಚದಲ್ಲಿ ಅಶಾಂತಿಯನ್ನು ತಂದೊಡ್ಡಿರುತ್ತದೆ. ದಿನರಾತ್ರಿ, ದುರ್ಭಾವನೆಗಳ ಜೀವನವು ನಮ್ಮದಾಗಿದೆ. ವಿವೇಕ ವಿಚಾರವು ನಮ್ಮ ಹೃದಯದಲ್ಲಿ ಹುಟ್ಟುವುದಿಲ್ಲ. ನಾವು ಪ್ರಪಂಚದಲ್ಲಿ ಸರ್ವಥಾ ಸ್ಥಿರವಾಗಿ ಜೀವಿಸುವ ವ್ಯಕ್ತಿಗಳೆಂಬ ಅಜ್ಞಾನವು ನಮ್ಮ ತಲೆಯಲ್ಲಿ ತಿರುಗುತ್ತಿದೆ. ನಮ್ಮಗಳ ಸುಖಕ್ಕಾಗಿ ಇತರರನ್ನು

ಪೀಡಿಸುವುದಕ್ಕೂ ಇತರರ ಸರ್ವಸ್ವವನ್ನು ಹರಣ ಮಾಡುವುದಕ್ಕೂ ನಾವು ಸರ್ವದಾ ಸಿದ್ಧರಾಗಿದ್ದೇವೆ.

ಭಗವಾನ್ ಮಹಾವೀರ ಸ್ವಾಮಿಯು ಪ್ರಪಂಚದ ಪರಮ ಶಾಂತಿಗೆ ದಿವ್ಯೌಷಧಿಯನ್ನು ನಿರ್ಣಯಿಸಿಟ್ಟಿದ್ದರು. ಅದರ ಮುಂದೆ ಇತರ ಯಾವ ಔಷಧವೂ ಅದರಷ್ಟು ಫಲಕಾರಿಯಾಗದು. "ಜೀವಿಸಿರಿ, ಇತರ ಸರ್ವ ಪ್ರಾಣಿಗಳೂ ಶಾಂತಿಯಲ್ಲಿ ಜೀವಿಸುವಂತೆ ಮಾಡಿರಿ" (Live and let live) ಇದು ಆ ಮಹಾತ್ಮರ ದಿವ್ಯೌಷಧಿಯಾಗಿದೆ. ಇದರ ತಿಳುವಳಿಕೆ ಇದ್ದು, ಆ ತರಹದ ಜೀವನವನ್ನು ಸಾಗಿಸುವುದರಿಂದಲೇ, ಸಂಪೂರ್ಣ ಪ್ರಪಂಚದಲ್ಲಿ ಪರಮಶಾಂತಿಯು ಸ್ಥಾಪಿತವಾಗುವುದೇ ಹೊರತು, ಅನ್ಯಥಾ ಸಾಧ್ಯವಾಗಲಾರದು.

---

# ಧರ್ಮವಿಪತ್ತು

ನಾಲ್ಕು ದಿಕ್ಕುಗಳಿಂದಲೂ ಕೇಳಿಸುತ್ತಿದೆ:

"ಧರ್ಮವು ವಿಪತ್ತಿಗೊಳಗಾಗಿದೆ; ಸ್ವಧರ್ಮವನ್ನು ರಕ್ಷಿಸತಕ್ಕದ್ದು. ಧರ್ಮವು ನಾಶವಾದಲ್ಲಿ ಮತ್ತೇನು ಉಳಿದೀತು?"

ಹಿಂದೂಧರ್ಮದ ಮೇಲೆ ವಿನಾಶದ ಮೇಘಗಳು ಕವಿಯುತ್ತಿವೆ. ಹಿಂದುಗಳ ದೇವಸ್ಥಾನಗಳು, ಮೂರ್ತಿಗಳು, ವೇದಗಳು ಕಳೆಯುತ್ತಿವೆ. ವರ್ಣವ್ಯವಸ್ಥೆ, ಜ್ಞಾನ, ಸಂಸ್ಕೃತಿ ಕಾಲದೋಷದಿಂದ ಮುಳುಗುತ್ತಿವೆ.

ಮುಸಲ್ಮಾನರ ಮಸೀದಿಗಳಿಗೆ, ಮುಸಲ್ಮಾನರ ಧರ್ಮಗ್ರಂಥ ಕೊರಾನಿಗೆ ವಿರುದ್ಧವಾಗಿ ಕುಟಿಲಗಳು ರಚಿಸಲ್ಪಡುತ್ತಿವೆ.

ಕಾಲದೋಷದ ಪ್ರಭಾವವು ಜೈನ ಧರ್ಮದ ಮೇಲೆ ಕವಿಯುತ್ತಿದೆ. ಜೈನರ ಸಂಖ್ಯೆಯು ದಿನೇ ದಿನೇ ಕಡಮೆಯಾಗುತ್ತಿದೆ; ಜೈನರ ಸಾಮ್ರಾಜ್ಯವು ಅಳಿದುಹೋಗಿದೆ; ಜೈನಶಾಸ್ತ್ರದ ತತ್ತ್ವಗಳು ಕಠಿಣ ನಿಬಂಧನೆಗಳಾಗಿ ತೋರಿಬರುತ್ತಿವೆ.

ಬೌದ್ಧಧರ್ಮದ ತತ್ತ್ವಗಳು ಮೂಲೆಪಾಲಾಗುತ್ತಿವೆ. ಭಗವಾನ್ ಬುದ್ಧನು ಹೇಳಿದ ಮೈತ್ರೀ ದಯೆ—ಇವುಗಳು ಭಾರತದಿಂದಲೂ ಭೂಲೋಕದಿಂದಲೂ ಉಚ್ಚಾಟನೆಯಾಗುತ್ತಿವೆ.

ಪಾರ್ಸಿಗಳ ಕೂಗೂ ಇದೇ ಆಗಿದೆ; ಕ್ರೈಸ್ತರ ಮೊರೆಯೂ ಇದೇ ಆಗಿದೆ. ನಮ್ಮ ಸಂಸ್ಕೃತಿ, ನಮ್ಮ ಧರ್ಮ, ನಮ್ಮ ಅಧಿಕಾರ ಕಳೆಯುತ್ತಿವೆ; ತಿರಸ್ಕೃತವಾಗುತ್ತಿವೆ.

ಧರ್ಮದ ರಕ್ಷಣೆಗಾಗಿ, ಪಾಕಿಸ್ತಾನ ಬೇಕೆನ್ನುವರು ಕೆಲವರು; ಜಾತಿಯ ರಕ್ಷಣೆಗಾಗಿ, ಅಧಿಕಾರ ವಿಶೇಷವನ್ನು ತಮಗೀಯಬೇಕೆನ್ನುವರು ಕೆಲವರು; ಹಿಂದುಗಳು, ಮುಸಲ್ಮಾನರು, ಸಿಕ್ಖರು, ಬೌದ್ಧರು, ಪಾರ್ಸಿಯರು, ಕ್ರೈಸ್ತರು ಎಲ್ಲರೂ ತಮ್ಮ ನಾಶವಾಗುತ್ತಿದೆಯೆಂಬ ಭಯ

ದಿಂದಲೇ ಸ್ವಾರ್ಥಪರರಾಗುತ್ತಿದ್ದಾರೆ. ಸಂಪೂರ್ಣ ಮಾನವ ಸಮಾಜದ ಅಭ್ಯುದಯವನ್ನು ಕಡೆಗೊತ್ತಿ ತಮ್ಮ ಅಧಿಕಾರಕ್ಕಾಗಿ, ತಮ್ಮ ಸ್ವಾರ್ಥಕ್ಕಾಗಿ ಹಟ ತೊಡುತ್ತಿದ್ದಾರೆ. ನಿಜವಾದ ಧರ್ಮದ ರಹಸ್ಯವು ಸ್ವಾರ್ಥತೆಯಾಗಿರಲಾರದು. ನಿಜವಾದ ಧರ್ಮಕ್ಕೆ ನಾಶದ ಭಯವು ಇರಲಾರದು.

ಆದರೆ ನಿಜವಾಗಿಯೂ—ಯಥಾರ್ಥವಾಗಿ ಧರ್ಮವು ನಾಶವಾಗುತ್ತಿದೆಯೇ? ಧರ್ಮವು ನಾಶವಾಗುವಂತಹ ವಸ್ತುವೆ? ವಿವೇಕ ಬುದ್ಧಿಯ ಮಾನವರು, ಸಂಕುಚಿತ ಭಾವನೆಗಳನ್ನು ಬಿಟ್ಟುಬಿಡಬೇಕು. ಸಂಪೂರ್ಣ ವಿಶ್ವದ ಮಾನವ ಸಮಾಜವು ಸಂಪೂರ್ಣ ಐಕ್ಯವನ್ನು ಹೊಂದುವಂತಾಗಲಿ. ವಿಶ್ವಪ್ರೇಮದ ಪ್ರಕಾಶದಲ್ಲಿ ಬಳೆದು ನಿತ್ಯನಿಯಮಗಳ ಪಾಲನೆಯಿಂದ ಆತ್ಮೋನ್ನತಿಯನ್ನು ಸಾಧಿಸಿ ಜೀವನವನ್ನು ಸಫಲಗೊಳಿಸಲು ಲವಲವಿಕೆಯೊಂದು ಜನರಲ್ಲಿ ಹೆಚ್ಚುತ್ತಿದೆ. ಜನರಲ್ಲಿ ವಿಶಾಲ ದೃಷ್ಟಿಯ ಉದಾರ ಭಾವನೆಯ ಬುದ್ಧಿಯು ಹೆಚ್ಚಲಿ; ಮಾನವ ಸಮಾಜದ ಏಳಿಗೆಗಾಗಿ, ಜೀವನ ಸರ್ವಸ್ವವನ್ನು ನಿಷ್ಕಾಮ ಸೇವೆಯಲ್ಲಿ ಕಳೆಯಬೇಕೆಂಬ ಸದ್ಬುದ್ಧಿಯು ಜನರಲ್ಲಿ ಹೆಚ್ಚಲಿ: ಅದೇ ನಿಜವಾದ ಧರ್ಮರಹಸ್ಯವಲ್ಲವೆ?

---

# ಆಶಾಜ್ಯೋತಿಯು ಮೂಡುತಿದೆ

ಅದೋ, ಆಶಾಜ್ಯೋತಿಯು ಮೂಡುತಿದೆ. ಮೂಡಿದ ಜ್ಯೋತಿಯ ಬೆಳಕು ದಿಗಂತದಿಂದ ದಿಗಂತಕ್ಕೆ ಹರಡುತಿದೆ. ಕಣ್ಣಸ್ಸರಳಿಸಿ, ಜ್ಯೋತಿಯನ್ನು ದಿಟ್ಟಿಸಿ ಬೆಳಕನ್ನು ಕಂಡು ಧನ್ಯರಾದೆವೆನ್ನಿ. ಹರಡುವ ಬೆಳಕಿನಲ್ಲಿ ಮಾಯವಾಗುವ ಅಂಧಂತಮವನ್ನು ತಿಳಿದು, ಆ ಅಂಧಂತಮದೊಡನೆ ಇಳಿದು ಬಂದ ಅವನತಿಯನ್ನು ತುಳಿದು ಮೆಟ್ಟಿ ಮುಕ್ತರಾದೆವೆನ್ನಿ. ಮೂಡಿದ ಈ ಜ್ಯೋತಿಗೆ ಬೆಳ್ಳಿಯ ಹೊಳಪು, ನೇಸರನ ಬಲವು, ಚಂದಿರನ ತಂಪು ಕೂಡಿ ಬಂದಿದೆಯಲ್ಲವೆ? ನವ ಉತ್ಸಾಹ, ನವ ಚೇತನ ಮತ್ತು ನವ ಆಶಯಗಳು ಈ ಜ್ಯೋತಿಯಿಂದ ಮತ್ತೆ ನಮಗೆಲ್ಲ ಪ್ರಾಪ್ತವಾಯಿತೆನ್ನಿ!

ಸಮಾಜವು ಅವನತವಾಯಿತೆಂದು ನಿರಾಶರಾಗಬೇಡಿ. ಅವಸರ್ಪಿಣೀಕಾಲದ ಪ್ರಕೃತಿನಿಯಮದಿಂದ ಸಮಾಜಕ್ಕೆ ಅಧೋಗತಿಯಾಯಿತೆಂದು ಕಾರ್ಯವಿಮುಖರಾಗಬೇಡಿ. ಕಾಲಚಕ್ರಕ್ಕೆ ಸಿಲುಕಿ ಕೆಳಗುರುಳಿದ ಸಮಾಜದ ಗೌರವ ಪತಾಕೆಯೂ ಕುಸಿಯಿತೆಂದು ಕರ್ತವ್ಯಪರಾಙ್ಮುಖರಾಗಬೇಡಿ. ಎದ್ದೇಳಿ, ಕಾರ್ಯದಕ್ಷರಾಗಿರಿ; ಕರ್ತವ್ಯಪರರಾಗಿರಿ; ಧರ್ಮಸೇವಾತತ್ಪರರಾಗಿರಿ. ಮೂಡಿವ ಜ್ಯೋತಿಯು ನಿಮಗಾಗಿಯೇ ಮೂಡಿದೆ. ಮೂಡಿದ ಜ್ಯೋತಿಯು ನಿಮಗಾಗಿಯೇ ಬೆಳಗುತಿದೆ. ಹರಡುವ ಬೆಳಗು ನಿಮಗಲ್ಲದಿದ್ದರೆ, ಅಯ್ಯೋ, ಕಂಡೂ ಕಂಡು ಹಿಂದಕ್ಕೆ ಸರಿಯುವಿರಲ್ಲವೆ? ನೋಡಿ, ಮೂಡಿದ ಜ್ಯೋತಿಯು ಮೇಲೇರುತಿದೆ; ಅದರ ಬೆಳಕು ಇನ್ನೂ ಸ್ಪಷ್ಟವಾಗುತಿದೆ.

ನಾವೆಲ್ಲ ಕರ್ತವ್ಯವಿಮುಖರಾಗಿದ್ದಾಗ, ನಾವೆಲ್ಲ ಅಂಧಂತಮದ ಕತ್ತಲಲ್ಲಿ ನಷ್ಟವಾಗಿದ್ದಾಗ, ನಾವೆಲ್ಲ ಸರ್ವೋತ್ಕೃಷ್ಟಸ್ಥಾನದಿಂದ ನಮ್ಮ ಸಮಾಜವು ಉರುಳಿದುದನ್ನು ಕಂಡಾಗ, ಧರ್ಮವು ಕಿಡಿಯಾಗಿ ಉಳಿದು ನಿಂತಿದೆಯೆಂದು ಕಂಡಿರಲಿಲ್ಲ. ಧರ್ಮವು ಸಂಪೂರ್ಣವಾಗಿ ನಮ್ಮನ್ನು ತೊಲಗಿಲ್ಲ; ಕಿಡಿಯಾಗಿ ಉಳಿದಿರುವುದು. ಆ ಕಿಡಿಗೆ ಲೋಕವನ್ನೇ ಬೆಳ

ಗಿಸುವ ಅಪೂರ್ವ ಶಕ್ತಿಯಿರುವುದು. ಆ ಕಿಡಿಯೆಲ್ಲೆಂದು ಹುಡುಕುವು ದೇನೆಯೆ? ಇಲ್ಲೇಯಿದೆಯಲ್ಲವೆ? ಉರಿಸಿರಿ, ಪ್ರಜ್ವಾಲಿಸಿರಿ, ಬೆಳಗಿಸಿರಿ.

ಸಮಾಜವು ಅವನತವಾಗಿದೆಯೆಂದು ಏನು ಚಿಂತಿಸುವಿರಿ? ಒಂದು ತೀರ್ಥಂಕರರ ಕಾಲದಿಂದ ಮತ್ತೊಂದು ತೀರ್ಥಂಕರರ ಕಾಲದ ಕೆಲವು ಅಂತರದಲ್ಲಿ ಧರ್ಮವು ನಷ್ಟವಾಗಬಹುದು, ಸಮಾಜವು ಕ್ಷೀಣವಾಗ ಬಹುದು, ಕಾಲಚಕ್ರದ ತಿರುಗುವಿಕೆಯನ್ನು ಯಾರಿಗೆ ನಿಲ್ಲಿಸಲು ಸಾಧ್ಯ? ಆ ಧರ್ಮದ ಕಿಡಿ, ಸಮಾಜದ ಕಿಡಿ ಶಾಶ್ವತವಾಗಿ ಉರಿಯುತ್ತಲೇ ಇದೆ. ಅದು ತಾನೆ ನಮ್ಮ ನೆನಪಿಗೆ ಉಳಿದು ಬರಲಿ. ಅದು ತಾನೆ ನಮ್ಮನ್ನು ಕಾರ್ಯತತ್ಪರರನ್ನಾಗಿ ಮಾಡಲಿ. ಅದು ತಾನೆ ನಮ್ಮಿಂದ ದ್ವೇಷಾ ಸೂಯೆಗಳನ್ನು ತೊಲಗಿಸಲಿ!

ನಮ್ಮ ಪೂರ್ವಜರ ಶ್ರೀಸಂಪತ್ತನ್ನು ಕೇಳಿಲ್ಲವೆ ನೀವು? ನಮ್ಮ ಪೂರ್ವಜರ ಧರ್ಮಪರಾಯಣತೆಯನ್ನೂ ಅಪೂರ್ವ ಗೌರವಗಳನ್ನೂ ತಿಳಿ ದಿಲ್ಲವೆ ನೀವು? ಅವುಗಳನ್ನು ನೆನೆದು ಉಬ್ಬುವಿರಿ?. ಅವುಗಳನ್ನು ನೆನೆದು ಕುಣಿಯುವಿರಿ. ಆದರೆ, ಆ ಶ್ರೀಸಂಪತ್ತಿನ ಎಳ್ಳಷ್ಟು ಭಾಗವು ನಮ್ಮ ಕೈಯಲ್ಲಿ ಉಳಿದಿದೆಯೆ? ಆ ಧರ್ಮಪರಾಯಣತೆಯ ಒಂದು ಕಣ ದಷ್ಟು ಭಾಗವು ನಮ್ಮಲ್ಲಿನ್ನೂ ಹರಿಯುತ್ತಿದೆಯೆ? ಹಾಗಾದರೆ ಆ ಪೂರ್ವ ಗೌರವದ ಪಲ್ಲವಿಯೇಕೆ? ಆ ಪೂರ್ವಗೌರವದ ಅಭಿಮಾನವೇಕೆ? ಆ ಪೂರ್ವಗೌರವಕ್ಕೆ, ಆ ಪೂರ್ವದ ಐಶ್ವರ್ಯಕ್ಕೆ, ನಾವು ಭಾಗಿಗಳಾಗಲು ಯೋಗ್ಯತೆಯು ಬೇಡವೆ? ಆ ಯೋಗ್ಯತೆಯನ್ನು ಸಂಪಾದಿಸುವ ನಮಗೆ ಯೋಗ್ಯತೆಯು ಬೇಕು; ಸಂಖ್ಯೆಯಲ್ಲ.

ಅವನತಿಯ ಕಾರಣವನ್ನು ತಿಳಿದುಕೊಂಡು, ಸಮಾಜದ ಅಭಿ ವೃದ್ಧಿಗೆ ಸಿದ್ಧರಾಗಬೇಕು. ವಿದ್ಯಾಪ್ರಚಾರದಿಂದ ಆಗುವಷ್ಟು ಜಾಗೃತಿ, ಕರ್ತವ್ಯ ಸಾಧನೆ, ಬೇರೆ ಯಾವುದರಿಂದಲೂ ಆಗದು. ವಿದ್ಯೆಯ ಮಹಿ ಮೆಯು ಅಪಾರವಾದುದು. ವಿದ್ಯೆಯ ಸಾಧನದಿಂದ ಹಿರಿಯರ ಐಶ್ವ ರ್ಯಕ್ಕೆ, ವಾಙ್ಮಯಕ್ಕೆ ನಾವು ಬಾಧ್ಯರಾಗಬೇಕು. ನಮ್ಮ ಆಚಾರವೇನು, ನಮ್ಮ ವಿಚಾರವೇನು, ನಮ್ಮ ಸಂಸ್ಕೃತಿಯೇನು—ಅವನ್ನು ತಿಳಿಸು ಕೊಂಡು ನಡೆಯಬೇಕು.

ಸಮಾಜಬಾಂಧವರೆ, ಧರ್ಮದ ಧ್ವಜವನ್ನು ಹಾರಿಸುವ. ಪ್ರಾಚೀನ ಆಚಾರವಿಚಾರಗಳ, ಹಿರಿಯರ ನಡೆ ನುಡಿಗಳ, ಪೂರ್ವಿಕರ ಹಾವಭಾವಗಳ ಬಾಧ್ಯತೆಗಾಗಿ, ಗುರುಕುಲಗಳನ್ನು ಸ್ಥಾಪಿಸಿ ನಮ್ಮ ಬಾಲಕರೆಲ್ಲರನ್ನು ಶಿಕ್ಷಿಸುವ. ನಮ್ಮಲ್ಲಿಂದ ಅಂಧಶ್ರದ್ಧೆಗಳನ್ನು ತೊಲಗಿಸಿ, ವಿಚಾರಪೂರ್ಣವಾದ ಲೋಕವನ್ನೆ ಸೃಷ್ಟಿಸುವ. ಲೋಕವೆಲ್ಲ ಅನಿಮಿಷ ದೃಷ್ಟಿಯಿಂದ ನಮ್ಮನ್ನು ನೋಡುತ್ತಿದೆಯಲ್ಲವೆ? ನಮ್ಮ ನಾಡಿಯಲ್ಲಿ ಪೂರ್ವಜರ ರಕ್ತಬಿಂದುವು ಹರಿಯುವುದಾದರೆ, ಸಮಾಜದ ಅವನತಿಯೆಂದು ಮೂರ್ಖ ಪ್ರಲಾಪವನ್ನೇಕೆ ಮಾಡಬೇಕು? ಕಾರ್ಯೋನ್ಮುಖರಾಗೋಣ! ಅದೋ ಕಾಣುತಿದೆ ಸಮಾಜದಭ್ಯುದಯದ ಅರುಣೋದಯ! ಏಳೋಣ. ಬ್ರಾಹ್ಮೀ ಮುಹೂರ್ತದ ಸಮಯವಿದು. ಸಮಾಜದ ಪವಿತ್ರ ಸಿಂಹಾಸನವನ್ನು ಪ್ರೇಮಾಮೃತದ ಅಭಿಷೇಕದಿಂದ ಪವಿತ್ರವನ್ನಾಗಿ ಮಾಡೋಣ!

---

# ದಿಗಂಬರತ್ವ

ಜೈನ ಧರ್ಮದ ಮುಖ್ಯ ತತ್ತ್ವಗಳಲ್ಲಿ ಒಂದಾದ ದಿಗಂಬರತ್ವವು ಅನಾದಿಕಾಲದಿಂದ ಇಂದಿನ ತನಕವೂ ಅನೇಕಾನೇಕ ಸಾಧುಗಳ ಜೀವನದಲ್ಲಿ ಪುಟಗೊಂಡು ಬಂದಿರುತ್ತದೆಂದು ಎಲ್ಲರಿಗೂ ತಿಳಿದ ವಿಷಯವಾಗಿರುತ್ತದೆ. ಆತ್ಮಕಲ್ಯಾಣಕ್ಕೂ ಲೋಕಕಲ್ಯಾಣಕ್ಕೂ ಪ್ರಯತ್ನಿಸುವ ಸಾಧುವಿಗೆ ಸರ್ವಸಂಗ ಪರಿತ್ಯಾಗವಾಗದೆ, ಸರ್ವವಿಧದ ಪರಿಗ್ರಹವನ್ನೂ ಬಿಟ್ಟುಬಿಡದೆ, ಜೀವನದ ಪವಿತ್ರತೆಯು ಬಂದೊದಗುವುದಿಲ್ಲವೆಂಬುದು ಒಂದಲ್ಲ ಒಂದು ಸಲ ಖಚಿತವಾಗದೆ ಇರುವುದಿಲ್ಲ. ಆಸೆ ಮುರಿದಂದು, ಬಂಧನ ಹೋದಂದು ಮೋಕ್ಷವಾದರೆ, ವಸ್ತ್ರಾದಿ ಸಮಸ್ತ ಭೌತಿಕ ತತ್ತ್ವಗಳ ಪರಿತ್ಯಾಗವಾಗದೆ, ಕೋಪಾದಿ ಮನೋವಿಕಾರಗಳ ಸಂಯಮವಾಗದೆ, ಆ ಮೋಕ್ಷವು ಪ್ರಾಪ್ತವಾಗಲಿಕ್ಕಿಲ್ಲವು. ಈ ದೃಷ್ಟಿಯಿಂದ ಮೋಕ್ಷಸಾಧಕರಾಗಿ ಸರ್ವಸಂಗಪರಿತ್ಯಾಗವನ್ನು ಮಾಡಿ, ದಿಗಂಬರ ಜೀವಿಗಳಾಗಿ ಲೋಕಕಲ್ಯಾಣವನ್ನು ಸಾಧಿಸಿದ ಯತಿವರ್ಯರು ಪವಿತ್ರಜೀವನದ ಪರಮಕೋಟಿಯನ್ನು ಹೊಂದಿದರು.

ಇಂತಹ ದಿಗಂಬರ ಜೀವನದಲ್ಲಿ ಪವಿತ್ರತೆಯು ಪುಟಗೊಂಡಂತೆಯೇ, ಶ್ರೇಷ್ಠವಾದ ಕಲೆಯೂ ರೂಪುಗೊಂಡಿದೆಯೆಂದೂ ಧಾರಾಳವಾಗಿ ಹೇಳಬಹುದು. ಗೊಮ್ಮಟಸ್ವಾಮಿಯ ಬಿಳಿಕಲ್ಲಿನ ವಿಗ್ರಹವನ್ನು ಶ್ರವಣಬೆಳಗೊಳದಲ್ಲಿ ಕಂಡಾಗ, ಕಪ್ಪುಕಲ್ಲಿನ ವಿಗ್ರಹವನ್ನು ಕಾರ್ಕಳದಲ್ಲಿ ಕಂಡಾಗ, ಗಾಂಭೀರ್ಯದ ಮೂರ್ತಿಯಾಗಿ, ಸೌಂದರ್ಯದ ಮನ್ಮಥನಾಗಿ, ಶಾಂತಿಯ ನೆಲೆಯಾಗಿ ಕಾಣುವನಲ್ಲದೆ, ಮತ್ತಾವ ಭಾವಪ್ರೇರಕವಾಗಿ ಆ ವಿಗ್ರಹಗಳು ತೋರಿಬರುವುವು? ಹಿಂದುಗಳು, ಮುಸಲ್ಮಾನರು, ಕ್ರೈಸ್ತರು ಎಷ್ಟು ಮಂದಿ, ಆ ವಿಗ್ರಹಗಳ ಮುಂದು ನಿಂತು ಲಘುವಾಗಿ ಬಂದವರು ಗುರುವಾಗಿ ಹೋಗಿಲ್ಲ, ಮೂಕರಾಗಿ ಬಂದವರು ವಾಚಾಳುಗಳಾಗಿಲ್ಲ? ಕಲೆಯೆಂಬುದನ್ನು ನಿರ್ದಿಷ್ಟವಾಗಿ ತೋರಿಸಬರುವುದಿಲ್ಲ, ಸೌಂದರ್ಯವೆಂಬುದನ್ನು

ಬೆರಳಿಟ್ಟು ಅಂಕಿಸಿ ಕೊಡಲಾಗುವುದಿಲ್ಲ. ಪಾವಿತ್ರ್ಯತೆಯನ್ನು ಹೃದಯ ದಿಂದ ತಿಳಿದಂತೆ, ಸೌಂದರ್ಯವನ್ನು ಮನಸ್ಸಿನಿಂದ ತಿಳಿದುಕೊಳ್ಳುವುದ ಲ್ಲವೆ? ಶ್ರೇಷ್ಠವಾದ ಕಲೆಗೆ ಮನಸ್ಸೆ ಆಧಾರವಲ್ಲದೆ, ಲೋಕದ ರೀತಿ ನೀತಿ, ಲೋಕದ ಜನರ ನ್ಯೂನಾತಿರಿಕ್ತಗಳು ಪ್ರಮಾಣವೆಂದು ಎಷ್ಟು ಮಾತ್ರವೂ ಹೇಳಲಾಗುವುದಿಲ್ಲ.

ದಿಗಂಬರತ್ವದಲ್ಲಿ ಪಾವಿತ್ರ್ಯವಲ್ಲದೆ, ಅಸಭ್ಯತೆಯು ಇರುವುದಿಲ್ಲವು. ಗಿಡದಲ್ಲಿನ ಹೂವು, ಮರದಲ್ಲಿನ ಹಣ್ಣು, ಚೆಲುವಾಗಿ—ದಿಗಂಬರವಾಗಿಯೆ ಕಾಣುವಂತೆ, ಸಾಧುವಿನ ದಿಗಂಬರ ಜೀವನ ಪರಿಶುದ್ಧವಾಗಿದೆ. ದಿಗಂಬ ರತ್ವವೆಂಬುದು—ದಿಕ್ಕುಗಳೇ ವಸನ, ದಿಕ್ಕುಗಳೇ ವಸ್ತ್ರ, ದಿಕ್ಕುಗಳೇ ಅಂಬರ ಎಂದೆನ್ನುವಾಗ ಮಾನವನಿಗೆ, ಒಂದು ಹೂವಿಗಿದ್ದಂತೆ, ಒಂದು ಬಳ್ಳಿ ಗಿದ್ದಂತೆ, ಒಂದು ವೃಕ್ಷಕ್ಕಿದ್ದಂತೆ ದಿಗಂಬರತ್ವವು ಪ್ರಕೃತಿಯ ಕೊಡಿಗೆ ಯೆಂದು ಸ್ವಾಭಾವಿಕವಾದ ಶೃಂಗಾರವೆಂದು ಹೇಳಿದಂತಾಗುತ್ತದೆ.

ದಿಗಂಬರರಾಗಿ, ನಿರ್ಮಲವಾದ ಯಾವ ಜೀವನವನ್ನು ಜೀವಿಸು ವರೋ, ದಿಗಂಬರರಾಗಿ ಪರಿಶುದ್ಧವಾದ ಯಾವ ಜೀವನವನ್ನು ಜೀವಿಸು ವರೋ—ಆ ಯತಿವರ್ಯರೇ ಪಾವಿತ್ರ್ಯಕ್ಕೆ, ಮೋಕ್ಷದ ಪರಮಸಾಧನೆಗೆ ಅರ್ಹರಾದವರು. ಅವರ ದಿಗಂಬರತ್ವದಲ್ಲಿ ಅಸಭ್ಯತೆಗೆ ಯಾವದೊಂದು ಕಾರಣವೂ ಇರುವುದಿಲ್ಲ. ಲೋಭ, ಮೋಹ, ಮದ, ಮತ್ಸರಾದಿಗಳು ಅಪನುಹಮಿಕೆಯಿಂದ ಬರುವಲ್ಲಿ, ದುರಾಶೆ, ಅತ್ಯಾಶೆಗಳು ಎದೆತಟ್ಟಿ ಮುಂಬರುವಲ್ಲಿ ಅಸಭ್ಯತೆಯೆಂಬುದು ತೋರುವುದಲ್ಲದೆ, ಅಶ್ಲೀಲವೆಂಬುದು ಕಾಣುವುದಲ್ಲದೆ, ಶಾಂತಿ, ಸಮಾಧಾನ ಒಸರುವಲ್ಲಿ, ಕ್ಷಮಾ ದಯೆಗಳು ಕೂಡುವಲ್ಲಿ ಅಸಭ್ಯತೆಯು ಕಾಣಲಾರದು.

ಶಿಲ್ಪಕಲೆಯಲ್ಲಿ ನಗ್ನತೆಯೆಂಬುದಿಲ್ಲ; ಅಲ್ಲಿ ನಗ್ನತೆಯೆಂಬುದು ಅಸಭ್ಯ ವಲ್ಲ. ಶಿಲ್ಪಕಲೆಯಲ್ಲಿ ಪ್ರಶಸ್ತವಾದ ಗ್ರೀಸಿನಲ್ಲಿ ನಗ್ನವಾದ ವಿಗ್ರಹಗಳಿಗೆ ಇರುವಷ್ಟು ಪ್ರಾಶಸ್ತ್ಯವು ಮತ್ತಾವುದಕ್ಕೂ ಇರುವುದಿಲ್ಲವೆಂಬುದು ಲೋಕ ವಿದಿತವಾದ ಸಂಗತಿಯು. ಗ್ರೀಕರ ಆ ವಿಗ್ರಹಗಳನ್ನು ಕಂಡಾಗ ಶ್ರವಣ ಬೆಳಗೊಳದ ಗುಮ್ಮಟಸ್ವಾಮಿಯನ್ನು ಕಂಡಂತೆಯೆ ಸುಂದರವಾಗಿ, ಚಿಕ್ಕ

ಮಗುವೊಂದು ಬತ್ತಲೆಯಾಗಿ ಓಡಿಬಂದು ನಮ್ಮನ್ನಪ್ಪಿದಂತೆಯೆ ಸ್ವಾಭಾವಿಕ ವಾಗಿ, ಮನಸ್ಸಿನ ಭಾವನೆಗಳು ರೂಪಿಸುವವು. ಕಲಾ ಶಾಲೆಗಳಲ್ಲಿ ಎಳೆಯ ಪ್ರಾಯದ ಹುಡುಗಿಯರೂ ಕೂಡ ಗಂಡಸರ ಬತ್ತಲೆ ಪ್ರತಿಮೆ ಗಳನ್ನು ಯಾವ ಸಂಕೋಚವೂ ಇಲ್ಲದೆ ಮಾಡುವುದನ್ನು ನಾವು ನೋಡಿ ಲ್ಲವೆ? ರೋಗಗ್ರಸ್ತರಾಗಿ ನರಳಿ, ಜೀವನ್ಮರಣಾವಸ್ಥೆಯಲ್ಲಿರುವ ರೋಗಿಗೆ, ಬತ್ತಲೆಯೆಂದು ಸಹಾಯವನ್ನು ನೀಡದೆ, ಯಾವ ವೈದ್ಯನು ನಿಷ್ಕರುಣಿ ಯಾಗಿ, ಅಂಧನಾಗಿ ಹೋಗಿ ಬಿಟ್ಟಾನು? ನಿಷ್ಕರುಣಿಯಾಗಿ ಬೆನ್ನುಕೊಟ್ಟು ನಡೆದಾಗಲ್ಲವೆ ಆತನು ಅಸಭ್ಯನು, ದುರಾತ್ಮನು, ವಂಚಕನು?

ಕಲೆಯಲ್ಲಿ ಮತ್ತು ಧರ್ಮದಲ್ಲಿ ಅಸಭ್ಯತೆಯೆಂಬುದಿಲ್ಲ. ಕಾರಣ, ಅವುಗಳೆರಡರ ತತ್ತ್ವವು ವಿಶಿಷ್ಟವಾದ ಧ್ಯೇಯದ ಮೇಲೆ ಹೊಂದಿಕೊಂಡಿದೆ. ಲೋಕದ ಎಲ್ಲಾ ಮತಗಳಲ್ಲಿಯೂ ಧರ್ಮದೃಷ್ಟಿಯಿಂದಲ್ಲದೆ, ಅಸಭ್ಯತೆ ಯೆನ್ನುವ ರೀತಿಯ ವಿಷಯಗಳಿವೆ. ಧರ್ಮದೃಷ್ಟಿಯಿಂದ, ಆ ವಿಷಯ ಗಳು ಪ್ರತಿಪಾದನೆಗೆ ಅರ್ಹವಾಗಿವೆ, ಯೋಗ್ಯವಾಗಿವೆಯೆಂದೆನ್ನಬೇಕು— ಭೀಭತ್ಸವಾಗಲಿ, ಸಂಕೋಚವಾಗಲಿ, ಕಲೆಯಲ್ಲಿ ಧರ್ಮದಲ್ಲಿ ಎಡೆಯನ್ನು ಹೊಂದುವುದಿಲ್ಲ. ಎಲ್ಲವೂ ನೋಡುವ ದೃಷ್ಟಿಕೋನವನ್ನು ಹೊಂದಿ ಕೊಂಡಿದೆ. ಓರೆಯಾಗಿ ಕಂಡರೆ, ಜಗತ್ತೇ ಓರೆಯಾಗುವುದು. ನೆಟ್ಟಗೆ ಕಂಡರೆ, ಜಗತ್ತೇ ನೆಟ್ಟಗೆ ಎಂದೆನ್ನುವ ಮಾತು ಇಲ್ಲಿ ಚೆನ್ನಾಗಿ ಒಪ್ಪುತ್ತದೆ.

ದಿಗಂಬರತ್ವದ ತತ್ತ್ವವು ಜೈನಧರ್ಮದ ಮುಖ್ಯ ತತ್ತ್ವಗಳಲ್ಲಿ ಒಂದಾಗಿರುವಂತೆಯೇ ಆ ತತ್ತ್ವಕ್ಕೆ ಇತರ ಧರ್ಮೀಯರು ಮನ್ನಣೆ ಕೊಟ್ಟಿರುವರೆಂಬುದು ಇತಿಹಾಸದಿಂದಲೂ ಪುರಾಣಗಳಿಂದಲೂ ಅವರವರ ಧರ್ಮಗ್ರಂಥಗಳಿಂದಲೂ ತಿಳಿದುಬರುತ್ತದೆ. ಕ್ರೈಸ್ತರ ಬೈಬಲಿನ ಪ್ರಕಾರ ಸೃಷ್ಟಿಯ ಆದಿಯಲ್ಲಿ ಆದಮ ಮತ್ತು ಈವರು ಬತ್ತಲೆಯಾಗಿಯೇ ಇದ್ದು, ನಂತರ ದೇವರ ವಾಕ್ಯಕ್ಕೆ ವಿರೋಧವಾಗಿ ನಡೆದು ಅದರ ನಂತರ ವಸ್ತ್ರಾದಿಗಳನ್ನು ತೊಟ್ಟುಕೊಂಡರೆಂಬುದಾಗಿ ಉಲ್ಲೇಖವಿರುತ್ತದೆ. ಹಾಗೆಯೆ (Isaih xx2)ದಲ್ಲಿ "At the same time spake the Lord by Isaih the son of Amoz saying,—Go and Loose the sack cloth from off thy loins and put off thy shoe

from thy foot.—And he did so, walking naked and barefoot."—ಅಂದರೆ, ಅದೇ ಸಮಯದಲ್ಲಿ ಈಸಾಯನು ಮಾತಾಡಿದನು: "ಹೋಗು ನಿನ್ನ ವಸ್ತ್ರವನ್ನು ಸೊಂಟದಿಂದ ಕಿತ್ತೊಗೆಯು ಮತ್ತು ಕಾಲುಗಳಿಂದ ಮೆಟ್ಟನ್ನು ಬಿಸುಡು." ಆಗ ಅವನು ಹಾಗೆಯೇ ಮಾಡಿ ನಗ್ನವಾಗಿ ಕಾಲಿಗೆ ಮೆಟ್ಟು ಇಲ್ಲದೆ ನಡೆದನು.

ವಾಷಿಂಗಟನ್ ಅರ್ವಿಸನು ಬರೆದ "ಮುಹಮ್ಮದನ ಜೀವನ"ವೆಂಬ ಉಪನ್ಯಾಸದಲ್ಲಿ "The 'tawaf' or a procession round the Caaba was an ancient ceremony observed before the time of Mahammad and performed by both sexes entirely naked." ಎಂದಿರುತ್ತದೆ. ಅಂದರೆ, "ಸುತ್ತಲು ಮುಹಮ್ಮದನ ಕಾಲದ ಹಿಂದೆ ಬತ್ತಲೆಯಾಗಿ ಹೆಂಗಸರೂ ಗಂಡಸರೂ ಕಾಬಾ ಕಲ್ಲಿನ ಸುತ್ತಬರುವ ಪ್ರಾಚೀನವಾದ ಪದ್ಧತಿಯಿತ್ತು."

ಹಿಂದೂ ಧರ್ಮಗ್ರಂಥಗಳಲ್ಲಿಯೂ ಸಾಹಿತ್ಯದಲ್ಲಿಯೂ ದಿಗಂಬರತ್ವಕ್ಕೆ ಮನ್ನಣೆಯಿದೆ. ಭರ್ತೃಹರಿಯು ವೈರಾಗ್ಯಶತಕದಲ್ಲಿ

> ಪಾಣಿಃ ಪಾತ್ರಂ ಪವಿತ್ರಂ ಭ್ರಮಣಪರಿಗತಂ ಭೈಕ್ಷಮಕ್ಷಯ್ಯಮನ್ನಂ ।
> ವಿಸ್ತೀರ್ಣಂ ವಸ್ತ್ರಮಾಶಾದಶಕಮಚಪಲಂ ತಲ್ಪಮಸ್ವಲ್ಪಮುರ್ವೀ ।
> ಯೇಷಾಂ ನಿಸ್ಸಂಗತಾಂಗೀಕರಣಪರಿಣತಸ್ವಾಂತಸಂತೋಷಿಣಸ್ತೇ ।
> ಧನ್ಯಾಸ್ಸಂನ್ಯಸ್ತದೈನ್ಯವ್ಯತಿಕರನಿಕರಾಃ ಕರ್ಮ ನಿರ್ಮೂಲಯಂತಿ ॥

ಯೋಗಿಗಳಿಗೆ ಪವಿತ್ರವಾದ ಕೈಗಳೇ ಭೋಜನಪಾತ್ರಗಳು; ಭಿಕ್ಷೆಯಿಂದ ಎತ್ತಿದ ಅನ್ನವೇ ಆಹಾರವು. ದಶದಿಕ್ಕುಗಳೇ ವಿಶಾಲವಾದ ವಸ್ತ್ರವು. ಅಖಂಡ ಭೂಮಂಡಲವೇ ಹಾಸಿಗೆಯು. ಈ ರೀತಿಯಲ್ಲಿ ಯಾವ ಮಹಾಪುರುಷರು ಇರುವರೋ ಅವರು ಜನನಮರಣರೂಪವಾದ ಸಂಸಾರಕರ್ಮವನ್ನು ನಾಶಪಡಿಸಿಕೊಂಡು ಮೋಕ್ಷಗಾಮಿಗಳಾಗುವರು.

ಮಹಾಭಾರತದ ಕಥಾನಕವೊಂದು ಮನನೀಯವಾಗಿರುತ್ತದೆ. ದೇವಕನ್ಯೆಯರು ಒಮ್ಮೆ ಒಂದು ಸರೋವರದಲ್ಲಿ ನಗ್ನರಾಗಿ ಜಲಕ್ರೀಡೆಯನ್ನಾಡುತ್ತಿದ್ದಾಗ, ಆ ಸರೋವರದ ಮಾರ್ಗವಾಗಿ ದಿಗಂಬರಿಯಾದ ಶುಕಾಚಾರ್ಯನು ಹಾದುಹೋಗುತ್ತಿರಲು ಅವರು ಯಾವ ಸಂಕೋಚವನ್ನೂ

ಪಡದೆ ಜಲಕ್ರೀಡೆಯಲ್ಲೇ ಮಗ್ನರಾಗಿದ್ದರು. ಈ ಶುಕಾಚಾರ್ಯನ ತಂದೆ ವ್ಯಾಸನು ಬಂದೊಡನೆ, ಅವರೆಲ್ಲ ಧಾವಿಸಿ ತಮ್ಮ ವಸ್ತ್ರಗಳನ್ನು ಧರಿಸಿ ಕೊಂಡರಂತೆ. ಶುಕಾಚಾರ್ಯನ ನಿಷ್ಕಳಂಕ ಮನಸ್ಸಿನ ಮಹತ್ತ್ವವನ್ನೂ ದಿಗಂಬರತ್ವದ ಸಭ್ಯಾಸಭ್ಯತೆಯನ್ನೂ ಇದರಿಂದ ನಾವು ತಿಳಿದುಕೊಳ್ಳಬಹು ದಾಗಿದೆ.

ಇತಿಹಾಸದಲ್ಲಿಯೂ ದಿಗಂಬರತತ್ತ್ವವನ್ನು ಪ್ರೋತ್ಸಹಿಸಿ ಕೊಡುವ ಅನೇಕಾನೇಕ ನಿದರ್ಶನಗಳು ಕಾಣುತ್ತಿವೆ. ಚಂದ್ರಗುಪ್ತ ಮೌರ್ಯನೂ, ಕರ್ನಾಟಕ ಉತ್ತಮಸಾಹಿತಿಯೂ ರಾಷ್ಟ್ರಕೂಟ ಅರಸನೂ ಆದ ಅಮೋಘ ವರ್ಷ ನೃಪತುಂಗನೂ ಸರ್ವವನ್ನೂ ತೊರೆದು ದಿಗಂಬರರಾದರೆಂದು (Vincent Smith's History of India P. 154) ಉಲ್ಲೇಖವಿದೆ. ಮಕಾರ್ಟಿಯವರ "Ancient India"ದಲ್ಲಿ ಈ ಉಲ್ಲೇಖವಿದೆ. "ಈ ಸಾಧುಗಳು ನಗ್ನರಾಗಿ ತಿರುಗಾಡುತ್ತ, ಎಲ್ಲಾ ಕಷ್ಟಸಹಿಷ್ಣುಗಳಾಗಿ, ಜನರ ಗೌರವಕ್ಕೆ ಪಾತ್ರರಾಗಿದ್ದರು. ಶ್ರೀಮಂತರ ಪ್ರತಿಯೊಂದು ಮನೆಯು ಅವರಿಗೆ ಸ್ವಾಗತವನ್ನು ಕೊಡುತಿತ್ತು; ಹೆಂಗಸರ ವಾಸಸ್ಥಾನಕ್ಕೂ ಕೂಡ ಅವರಿಗೆ ಪ್ರವೇಶವಿದ್ದಿತು."

ಗ್ರೀಕರ ತತ್ತ್ವಜ್ಞಾನಿ ಡಿಯೋಜಿನಸನು ನಗ್ನನಾಗಿದ್ದನೆಂದು ಪ್ರವಾದ ವಿದೆ. ಮುಸಲ್ಮಾನ ಆಳ್ವಿಕೆಯಲ್ಲಿಯೂ ದಿಗಂಬರ ಸಾಧುಗಳಿಗೆ ಎಲ್ಲ ಅನುಕೂಲತೆಗಳನ್ನು ಕೊಟ್ಟು ಗೌರವಿಸುತ್ತಿದ್ದರೆಂದು ಚರಿತ್ರೆಯಿಂದ ನಮಗೆ ತಿಳಿದುಬರುತ್ತಿದೆ. (Studies in "South Indian Jainism" part II p. 134)

ಈ ರೀತಿ ಪ್ರತಿಪಾದಿತವಾದ ದಿಗಂಬರ ತತ್ತ್ವವನ್ನು ಜೈನಸಾಧು ಗಳು ಸಂಪೂರ್ಣ ನಿವೃತ್ತಿಯನ್ನು ಹೊಂದಿದವರಾಗಿ ಜೀವನ್ಮುಕ್ತಿಗೆ ಅರ್ಹರಾಗುವರು. ಗೃಹಸ್ಥರು (ಶ್ರಾವಕರು) ವಾನಪ್ರಸ್ಥಾಶ್ರಮವನ್ನು ಕೈಕೊಳ್ಳುವಾಗ ಕ್ರಮೇಣ ತಮ್ಮ ಉಡಿಗೆ ತೊಡಿಗೆಗಳಲ್ಲಿ ಕಡಮೆ ಕಡಮೆ ಮಾಡಿಕೊಳ್ಳುವರು. ಇದರ ಕೊನೆಯ ನೆಲೆಯಾದ ಹನ್ನೊಂದನೆಯ ನೆಲೆಯಲ್ಲಿ ಕೇವಲ ಲಂಗೋಟಿಯನ್ನೇ ಧರಿಸಿಕೊಳ್ಳುತ್ತಿರುವರು. ಆದರೆ ಮುನಿಗಳ ಸ್ಥಿತಿಯು ಇದಕ್ಕಿಂತಲೂ ಉತ್ಕೃಷ್ಟವಿದ್ದು, ಅವರು ಲಂಗೋಟಿ ಯನ್ನು ತೊರೆದು ಬತ್ತಲೆಯಾಗಿರುವರು.

---

# ಆಸ್ತಿಕವಾದ

ಜೈನ ಧರ್ಮವೂ ಬೌದ್ಧ ಧರ್ಮವೂ ಚಾರ್ವಾಕ ಧರ್ಮವೂ ವೇದಗಳು ಧರ್ಮ ಮೂಲವಲ್ಲವೆಂದು ಒಪ್ಪುವುದಿಲ್ಲವಾದುದರಿಂದ ನಾಸ್ತಿಕವಾದವೆಂದು ಹೇಳುವುದುಂಟು. ಆದರೆ ಇನ್ನೊಂದು ದೃಷ್ಟಿಯಿಂದ, ಆತ್ಮ, ಮೋಕ್ಷ ಮತ್ತು ಮೋಕ್ಷಮಾರ್ಗಗಳಲ್ಲಿ ಸಂಬದಿಸುವುದು ನಾಸ್ತಿಕವಾದವೆಂದು ಹೇಳುವುವಾದರೆ, ಚಾರ್ವಾಕ ಧರ್ಮವೊಂದೇ ನಾಸ್ತಿಕವೆಂದು ಹೇಳಬೇಕಾಗಿದೆ. ಜೈನ ದರ್ಶನವನ್ನೂ ಹಿಂದುಸ್ಥಾನದ ಇತರ ದರ್ಶನಗಳನ್ನೂ ಪರಿಶೀಲಿಸಿದರೆ, ಇವುಗಳಿಗೆಲ್ಲ ಸಮಾನವಾದ ತತ್ತ್ವವೊಂದು ಕಂಡುಬರುತ್ತದೆ. ಹಿಂದೂ ದರ್ಶನಗಳಲ್ಲಿ ಯಾವುದೂ ಸೃಷ್ಟಿಯ ತತ್ವವನ್ನು ಒಪ್ಪುವುದಿಲ್ಲ. ಕಪಿಲನು ಸೃಷ್ಟಿಯ ತತ್ವವನ್ನು ಅಲ್ಲಗಳೆದು ವಿಜ್ಞಾನದ ಪ್ರಕಾರ—ಸೃಷ್ಟಿಯ ತತ್ತ್ವವು ಅಸಾಧ್ಯವೆಂದೂ ಅಸಿದ್ಧಾಂತವೆಂದೂ ಹೇಳುತ್ತಾನೆ. ಪತಂಜಲಿಯು ಈಶ್ವರನನ್ನು ಕುರಿತು ಹೇಳಿದರೂ, ಆತನು ಸೃಷ್ಟಿಕರ್ತಾರನೆಂದು ಹೇಳುವುದಿಲ್ಲ. ಅವನು ಬರೀ ಇತರ ಪುರುಷಗಳಿಗೆ ಒಂದು ಸದ್ಗುರಿಯೆಂದು ಹೇಳುತ್ತಾನೆ. ವೇದಾಂತ ದರ್ಶನವೂ ಸೃಷ್ಟಿಯ ತತ್ತ್ವವನ್ನು ಒಪ್ಪುವುದಿಲ್ಲ. ವೇದದಲ್ಲಿ ತೋರುವ ಸೃಷ್ಟಿಯ ವರ್ಣನೆಯು ಬರೀ ವ್ಯವಹಾರಿಕವೆಂದು ಶಂಕರನು ಪ್ರತಿಪಾದಿಸುತ್ತಾನೆ. ಮೀಮಾಂಸಕರೂ ಸೃಷ್ಟಿಯ ತತ್ತ್ವವನ್ನು ಅಲ್ಲಗಳೆದು, ಸೃಷ್ಟಿಕರ್ತೃತ್ವವನ್ನೂ ಸೃಷ್ಟಿಯ ಸಾಧ್ಯತೆಯನ್ನೂ ಒಪ್ಪುವುದಿಲ್ಲ.

ಮೀಮಾಂಸಕರು ವೇದಗಳು ಅಪೌರುಷೇಯವೆಂದೂ ಅವುಗಳೇ ಪ್ರಮಾಣವೆಂದೂ ಹೇಳಿ, ಸೃಷ್ಟಿಯ ತತ್ವವನ್ನು ಅಲ್ಲಗಳೆಯುವುದರಲ್ಲಿ ಅತಿ ಬಲಿಷ್ಠರಾಗಿರುತ್ತಾರೆ. ನೈಯಾಯಿಕರೂ ವೈಶೇಷಿಕರೂ ಮಾತ್ರ ಸೃಷ್ಟಿಯ ತತ್ತ್ವವನ್ನು ನಂಬುವಂತೆ ಕಾಣುತ್ತಾರೆ. ಆದರೆ ಅವರೂ ಕೂಡಾ ಅಣುಗಳು ಶಾಶ್ವತವೂ ಅಕೃತ್ಯವೆಂದೂ ಹೇಳುತ್ತಾರೆ. ಸೃಷ್ಟಿಕರ್ತಾರನು ಬರೀ ಜೀವನಿಗೆ ಅವನ ಕರ್ಮದ ಪ್ರಕಾರ ಬರೀ ದೇಹಗಳನ್ನು ಕಲ್ಪಿಸಿ ಕೊಡುತ್ತಾನೆಂದು ಹೇಳುತ್ತಾರೆ. ಈ ವೇದದರ್ಶನಗಳಲ್ಲಿ ಇರುವುದಕ್ಕಿಂತ ಹೆಚ್ಚಿಗೆ ಏನನ್ನೂ ಜೈನದರ್ಶನವು ಹೇಳುವುದಿಲ್ಲ. ಸೃಷ್ಟಿಯ ತತ್ತ್ವ

ವನ್ನು ಅಲ್ಲಗಳೆಯುವುದರಿಂದಲೇ ಜೈನಧರ್ಮವು ನಾಸ್ತಿಕವೆಂದು ಹೇಳು ವುದಾದರೆ, ಎಲ್ಲ ಹಿಂದೂ ದರ್ಶನಗಳು ನಾಸ್ತಿಕವೆಂದು ಹೇಳಬೇಕಾಗಿದೆ.

ಆಸ್ತಿಕ ದರ್ಶನಗಳ ಮುಖ್ಯ ಲಕ್ಷಣಗಳೆಂದರೆ, (1) ಸೋಪಾಧಿ ಆತ್ಮ (2) ಉಪಾಧಿರಹಿತ ಆತ್ಮ (3) ಆತ್ಮಸಾಕ್ಷಾತ್ಕಾರ, ಮೋಕ್ಷ ಮತ್ತು ಮೋಕ್ಷಮಾರ್ಗ. ಆತ್ಮನು ಒಂದು ಬೇರೆಯೇ ತತ್ವವೆಂದು ಶಂಕ ರನ ಅದ್ವೈತ ದರ್ಶನವನ್ನು ಬಿಟ್ಟು ಬೇರೆ ಎಲ್ಲ ದರ್ಶನಗಳೂ ಜೈನ ದರ್ಶನವೂ ಒಪ್ಪುತ್ತಿವೆ. ಅದ್ವೈತದಲ್ಲಿಯೂ ಕೂಡ, ಆತ್ಮನೆಂಬುದರ ಒಪ್ಪಿಗೆಯಿದೆ. ಶಂಕರನು ವೇದಾಂತ ಸೂತ್ರದ ಟಿಪ್ಪಣಿಯಲ್ಲಿ ಒಂದು ಕಡೆ ಪೂರ್ವಪಕ್ಷದಲ್ಲಿ, ಬೇರೆ ಬೇರೆ ಕರ್ಮಗಳ ಕಾರಣದಿಂದ ಆತ್ಮನ ಅನುಭವವು ಬೇರೆ ಬೇರೆಯಾಗುತ್ತದೆಂದು ಒಪ್ಪುತ್ತಾನೆ.

ಜೈನಧರ್ಮದ ಪ್ರಕಾರ ಸೃಷ್ಟಿಯು ಅನಾದಿಯಾದರೂ, ಕಾಲ ಪ್ರಮಾಣದಲ್ಲಿ ಅದು ರೂಪಾಂತರ ಹೊಂದಬಹುದು; ಅವರವರ ಕರ್ಮ ಗಳ ಪ್ರಕಾರ, ಬೇರೆ ಬೇರೆ ರೂಪ ಹೊಂದಿ ಸಹಸ್ರಾರು ಜೀವಗಳು ಇರು ವುವು. ಪ್ರತಿಯೊಂದು ಜೀವನೂ ಆಗಲಿಕ್ಕೆ ದೇವಾಂಶವಿದ್ದು, ಕರ್ಮ ಬಂಧನದಿಂದ ಆ ದೇವಾಂಶವು ಕಡಮೆಯಾಗಬಹುದು, ಅಥವಾ ಕಡಿ ಯಲ್ಪಡಬಹುದು. ಜೈನ ಧರ್ಮದ ಪ್ರಕಾರ, ಕರ್ಮತತ್ವವು ವಿಜ್ಞಾನಕ್ಕೆ ಒಂದು ಮುಖ್ಯವಾದ ಅಡಿಗಲ್ಲಾಗಿದೆ. ಒಬ್ಬ ಜೀವನು ಒಂದು ಕರ್ಮ ವನ್ನು ಮಾಡಬೇಕೆನ್ನುವಾಗ, ಅವನಲ್ಲಿ ಭಾವಕರ್ಮವು ಉಂಟಾಗು ತ್ತದೆ. ಆ ಕರ್ಮವನ್ನು ಅವನು ಮಾಡಿದಾಗ, ದ್ರವ್ಯಕರ್ಮವುಂಟಾ ಗುತ್ತದೆ. ಕ್ರೋಧ, ಮೋಹ, ಮಾಯಾ ಮತ್ತು ಲೋಭಗಳ ಕಾರಣ ದಿಂದ, ಒಂದು ಕರ್ಮವನ್ನು ಮಾಡಿದಾಗ, ಸೃಷ್ಟಿಯೊಳಗಿನ ಕರ್ಮ ವರ್ಗಣವೆಂಬ ಕೆಲವು ಅಣುಗಳು ಆ ಆತ್ಮನನ್ನು ಬಂಧಿಸುತ್ತವೆ. ಈ ಅಣುಗಳು ಒಬ್ಬನನ್ನು ಅವನು ಕರ್ಮವನ್ನು ಮಾಡಿದರೂ, ಮಾಡಲಿಕ್ಕೆ ಪ್ರಚೋದಿಸಿದರೂ ಒಪ್ಪಿದರೂ ಬಂಧಿಸುತ್ತವೆ. ಈ ಕರ್ಮಗಳೇ ಕರ್ಮ ದೇಹವಾಗಿ, ಎಲ್ಲ ಸಂಸಾರಗಳಲ್ಲಿ ಜೀವನನ್ನು ಹಿಂಬಾಲಿಸಿ, ಆತ್ಮನು ಮೋಕ್ಷವನ್ನು ಪಡೆಯುವಾಗ, ಕರ್ಮನಾಶವನ್ನು ಪಡೆಯುತ್ತವೆ.

ಎಲ್ಲ ಕರ್ಮಗಳಿಂದ ಮೋಕ್ಷವನ್ನು ಪಡೆದಾಗ ಆತ್ಮನು ದೇವ ರಾಗಿ, ಪರಮಾತ್ಮನಾಗಿ ಸಂಪೂರ್ಣವಾದ ಆನಂದವನ್ನೂ ಅಪರಿಮಿತ

ಶಕ್ತಿಯನ್ನೂ ಪಡೆಯುತ್ತಾನೆ. ಇದೀಗ ಜೈನಧರ್ಮದ ಪ್ರಕಾರ ದೇವತ್ವ ಹಾಗೂ ಪರಮಾತ್ಮ ತತ್ವವಾಗಿರುತ್ತದೆ. ಈ ವಿಚಾರದಲ್ಲಿ ಜೈನಧರ್ಮವೂ ಶಂಕರನೂ ಒಂದೇ ಅಭಿಪ್ರಾಯಪಟ್ಟರೂ, ಶಂಕರನ ಪ್ರಕಾರ ಬ್ರಹ್ಮವು ನಿರ್ಗುಣ ಬ್ರಹ್ಮವಾಗಿದ್ದು, ಜೈನರ ಪ್ರಕಾರ ಆತ್ಮನು ಅನಂತಕಲ್ಯಾಣ ಗುಣಪರಿಪೂರ್ಣನು. ರಾಮಾನುಜನು ಈ ವಿಚಾರದಲ್ಲಿ ಜೈನರೊಡನೆ ಒಪ್ಪುತ್ತಾನೆ. ಮುಕ್ತನಾದ ಆತ್ಮನು ತಿರಿಗೊಮ್ಮೆ ಸಂಸಾರಕ್ಕೆ ಬರುವುದಿಲ್ಲ. ಆದುದರಿಂದ ದೇವರು ಸಾಕಾರನಾಗಿ ಅವತಾರವಾಗಿ ಬರುವುದನ್ನು ಜೈನರು ಒಪ್ಪುವುದಿಲ್ಲ. ಮೋಕ್ಷಕ್ಕೆ ಆದಿಯಿದೆ, ಅಂತ್ಯವಿಲ್ಲ. ಸಂಸಾರಕ್ಕೆ ಆದಿಯಿಲ್ಲ, ಅಂತ್ಯವಿದೆ.

ಜೈನಧರ್ಮದ ಪ್ರಕಾರ, ಮೋಕ್ಷಕ್ಕೆ ಸಮ್ಯಗ್ದರ್ಶನ, ಸಮ್ಯಕ್ ಜ್ಞಾನ ಮತ್ತು ಸಮ್ಯಕ್‌ಚಾರಿತ್ರ ಸಹಾಯಕವಾಗಿದೆ. ಸಮ್ಯಗ್ದರ್ಶನವೆಂದರೆ, ತತ್ತ್ವಗಳಲ್ಲಿ ನಂಬಿಕೆ. ಸಮ್ಯಕ್‌ಜ್ಞಾನವೆಂದರೆ, ಈ ತತ್ತ್ವಗಳ ಸರಿಯಾದಂತಹ ತಿಳುವಳಿಕೆ. ಸಮ್ಯಕ್‌ಚಾರಿತ್ರವೆಂದರೆ, ಶಾಸ್ತ್ರಗಳಲ್ಲಿ ಹೇಳಿದ ತತ್ತ್ವಗಳ ಪ್ರಕಾರ ಜೀವನವನ್ನು ಮಾಡುವುದಾಗಿದೆ. ಈ ಸಮ್ಯಕ್‌ಚಾರಿತ್ರವು ಸಂಸಾರಿಗಳಿಗೂ ಮುನಿಗಳಿಗೂ ಬೇರೆ ಬೇರೆಯಾಗಿದೆ. ಸಂಸಾರಿಗಳಿಗೆ ಅಣುವ್ರತಗಳೆಂದೂ ಮುನಿಗಳಿಗೆ ಮಹಾವ್ರತಗಳೆಂದೂ-ಧಾರ್ಮಿಕ ಕಟ್ಟಳೆಗಳಿವೆ. ಆದರೆ ಈ ಎಲ್ಲ ವ್ರತಗಳಿಗೆ ಅಹಿಂಸೆಯು ಮೂಲ. ಎಲ್ಲ ವ್ರತಗಳೂ ಅಹಿಂಸಾತತ್ವಕ್ಕೆ ಶರಣು. ಸಂಸಾರಿಗಳ ಮಟ್ಟಿಗೆ ಅಹಿಂಸಾತತ್ವವು ಸ್ವಲ್ಪ ಮಟ್ಟಿಗೆ ಪರಿಮಿತವಾಗಿದೆ; ಉದಾಹರಣೆಯಾಗಿ, ಅವನು ವನಸ್ಪತಿಯನ್ನು ತನ್ನ ಜೀವನಕ್ಕಾಗಿ ಉಪಯೋಗಿಸಬಹುದು. ಎರಡಕ್ಕಿಂತ ಹೆಚ್ಚು ಇಂದ್ರಿಯಗಳಿರುವ ಯಾವ ಪ್ರಾಣಿಯನ್ನೂ ಆತನು ಹಿಂಸಿಸಬಾರದು. ಮುನಿಗಳು ಎಲ್ಲ ವ್ರತಗಳನ್ನು ಸರಿಯಾಗಿ ಮತ್ತು ಸಂಪೂರ್ಣವಾಗಿ ಕಾಪಾಡಬೇಕು.

ಕೆಲವರು ಸಮ್ಯಗ್ದರ್ಶನವೇ ಮೋಕ್ಷಕ್ಕೆ ಸಾಕೆಂದೂ, ಇನ್ನು ಕೆಲವರು ಸಮ್ಯಕ್ ಜ್ಞಾನವೇ ಸಾಕೆಂದೂ ಮತ್ತು ಕೆಲವರು ಸಮ್ಯಕ್‌ಚಾರಿತ್ರವೇ ಮುಖ್ಯವೆಂದೂ ಹೇಳುತ್ತಾರೆ. ಆದರೆ ಜೈನಧರ್ಮವು ಈ ಮೂರೂ ಮೋಕ್ಷಕ್ಕೆ ಅಗತ್ಯವೆಂದು ಸಾರುತ್ತದೆ.

---

# ಜೈನ ಧರ್ಮದ ಐತಿಹಾಸಿಕ ಕಾಲ

ಅವಿಚ್ಛಿನ್ನವಾದ ಜೈನಧರ್ಮದ ಇತಿಹಾಸವನ್ನು ಈ ವರೆಗೆ ಬರೆದುದಿಲ್ಲ. ಅವನ್ನು ಸಂಗ್ರಹಿಸಿ ಬರೆಯುವುದಾದರೂ ಕಷ್ಟಸಾಧ್ಯವಾದ ಕೆಲಸ. ಜೈನಧರ್ಮ ಮತ್ತು ಅದರ ತತ್ತ್ವಗಳ ಇತಿಹಾಸ ಶಿಕ್ಷಣವು ಬಹಳ ಶೈಶವಾವಸ್ಥೆಯಲ್ಲಿದೆ. ಜೈನಧರ್ಮದ ಬೆಳವಣಿಗೆಯು ಮತ್ತು ಕುಂದುವಿಕೆಯ ಚರಿತ್ರೆಯನ್ನು ನಾವು ತಿಳಿಯಬೇಕಾದರೆ ಅದರಲ್ಲಿ ಇನ್ನೂ ಸಂಶೋಧನೆಗಳು ಆಗಬೇಕು. ಇಷ್ಟರ ತನಕದ ಸಂಶೋಧನೆಯ ಫಲಿತಾಂಶವಾಗಿ ಅದರ ಚರಿತ್ರೆಯು ಮೂರು ಸಾವಿರ ವರುಷಗಳ ಬೇರೆಬೇರೆ ಕಾಲದ ಉದಾತ್ತಗುಣಗಳು ತಿಳಿದುಬಂದಿವೆ. ಅವರ ಕಾಲಗಳನ್ನು ಈ ರೀತಿ ವಿಂಗಡಿಸಬಹುದು.

೧ ಆದಿಚರಿತ್ರೆಯ ಕಾಲ—ಆರನೆಯ ಶತಮಾನ (ಕ್ರಿ. ಪೂ.) ದ ಹಿಂದೆ.

೨ ಮೊದಲ ಚರಿತ್ರೆಯ ಕಾಲ—ಆರನೆಯ ಶತಮಾನ (ಕ್ರಿ. ಪೂ.) ದಿಂದ ನಾಲ್ಕನೆಯ ಶತಮಾನ (ಕ್ರಿ. ಶ.) ದ ವರೆಗೆ.

೩ ಪುರಾತನ ಮಧ್ಯಚರಿತ್ರೆಯ ಕಾಲ—ನಾಲ್ಕನೆಯ ಶತಮಾನದಿಂದ ೧೨ನೆಯ ಶತಮಾನದ ವರೆಗೆ.

೪ ಮಧ್ಯಚರಿತ್ರೆಯ ಕಾಲ—೧೨ನೆಯ ಶತಮಾನದಿಂದ ೧೬ನೆಯ ಶತಮಾನದ ವರೆಗೆ.

೫ ಆಧುನಿಕ ಚರಿತ್ರೆ—೧೬ನೆಯ ಶತಮಾನದಿಂದ ಇಂದಿನ ವರೆಗೆ.

## ೧. ಆದಿಚರಿತ್ರೆಯ ಕಾಲ

[6ನೇ ಶತಮಾನ (ಕ್ರಿ. ಪೂ.) ದ ಹಿಂದೆ]

ಈ ಕಾಲವು ಶ್ರೀ ಮಹಾವೀರ ತೀರ್ಥಂಕರರ ಕಾಲದಿಂದ ಹಿಂದಿನ ಪುರಾಣಕಾಲದ ತನಕ ಸರಿಯುತ್ತದೆ. ಅದರ ಕಾಲದ ನಿಜವಾದ ಜ್ಞಾನವು ನಮಗಿಲ್ಲದಿದ್ದುದರಿಂದ ಅದಕ್ಕೆ ಆದಿಚರಿತ್ರೆಯ ಕಾಲವೆಂದು ನಾವು ಹೇಳಬೇಕಾಯಿತು. ಜೈನದೇವಾಲಯವು ಗಣನೀಯವಾಗಿ, ಜೈನಮತವನ್ನು ಸರಿದಾರಿಗೆ ತಂದ ಮಹಾವೀರ ತೀರ್ಥಂಕರರ ಸಮಯದಲ್ಲೇ ಜೈನ

ಮತವು ಹಿಂದಿನಿಂದಲೇ ದೊಡ್ಡ ಚರಿತ್ರೆಯಿಂದೊಡಗೂಡಿದೆ ಎಂಬ ವಿಚಾರವು ವಿವಾದ ಬಾಹ್ಯವಾಗಿದೆ. ಕ್ರಿ. ಪೂ. ೬ನೆಯ ಶತಮಾನದಲ್ಲಿ ಪ್ರಶಸ್ತಿ ಹೊಂದಿದ ಜೈನಮತವು ಒಂದು ದೊಡ್ಡ ಚರಿತ್ರೆಯ ಕಾಲವನ್ನು ಸೂಚಿಸುವುದು. ಅಹಿಂಸೆಯನ್ನು ಬೋಧಿಸಿ, ವೈದಿಕಬಲಿ ಅರ್ಪಣೆಗಳನ್ನು ನಿಷೇಧಿಸಿ, ಬತ್ತಲೆಯಾಗಿ ತಿರುಗುವ ಧರ್ಮ ಶಾಸ್ತ್ರಜ್ಞರ ಇರುವು ವೈದಿಕ ಸಾಹಿತ್ಯದಲ್ಲಿ ಕಂಡುಬರುತ್ತದೆ. ಮಹಾವೀರ ಮತ್ತು ಬುದ್ಧ ಇವರ ಚಾಲಕತ್ವದಲ್ಲಿ ಮುಂದರಿದು ಪ್ರಶಸ್ತಿ ಹೊಂದಿದ ಬ್ರಾಹ್ಮಣ ನಿಷೇಧ ಚಳವಳವು ಈ ಮುಂದಾಳುಗಳ ಕಾಲದ ಹಿಂದೆಯೇ ಜನ್ಮವೆತ್ತಿರುತ್ತದೆ.

ಈ ವಿಚಾರಗಳನ್ನು ಗ್ರಹಿಸಿ ಜೈನತತ್ತ್ವಗಳನ್ನು ಮನಗೊಂಡು ನಿರ್ಗ್ರಂಥ ಜೈನ ಪಂಥದ ಬೆಳವಣಿಗೆಯನ್ನು ಪರ್ಯಾಲೋಚಿಸಿದರೆ ಅದು ಚರಿತ್ರೆಯ ಕಾಲವು ತನ್ನಿಂದ ತಾನೇ ಸೂಚಿತವಾಗುವುದು.

## ೨. ಮೊದಲ ಚರಿತ್ರೆಯ ಕಾಲ

**[6ನೇ ಶತಮಾನ (ಕ್ರಿ. ಪೂ.)—4ನೇ ಶತಮಾನ (ಕ್ರಿ. ಶ.) ದ ವರೆಗೆ]**

ವಿದೇಹದೇಶದಲ್ಲಿ ಉಪನಿಷತ್ತುಗಳ ತತ್ತ್ವವು ಜನಕನಂತಹ ಅರಸರುಗಳಿಂದ ಹೆಚ್ಚಾಗಿ ಪ್ರೋತ್ಸಾಹಪೂರ್ವಕವಾಗಿ ಮನನ ಮಾಡಲ್ಪಟ್ಟಿರುತ್ತದೆ. ಅದೇ ಪ್ರದೇಶದಲ್ಲಿ ೬ನೆಯ ಶತಮಾನದಲ್ಲಿ ಮಹಾವೀರನೂ ಬುದ್ಧನೂ ಅವತಾರಹೊಂದಿದರು. ಬುದ್ಧನು ಅಂದು ಸಾರಿದ ಮತವು ಎಂದೋ ಹಿಂದುದೇಶದಿಂದ ಹೊರಗಟ್ಟಲ್ಪಟ್ಟರೂ ಸಾಧಾರಣ ಭೂಲೋಕದ ಜನರ ಮೂವರಲ್ಲಿ ಒಬ್ಬನು ಅದನ್ನು ಅವಲಂಬಿಸುತ್ತಾನೆ. ನಿರ್ಗ್ರಂಥ ಮತವು ಮಹಾವೀರನಿಂದ ಸಾರಲ್ಪಟ್ಟು ಆ ಮೇಲಿನ ಶತಮಾನಗಳಲ್ಲಿ ವಿವಿಧ ಅಂಕುರಗಳಲ್ಲಿ ಬೆಳೆದುಬಂದಿದೆ.

ಅಹಿಂಸಾಪ್ರಚಾರ, ಜೈನತತ್ತ್ವ ಮತ್ತು ಧರ್ಮಶಾಸ್ತ್ರ, ಜೈನಸಂಘವನ್ನು ರಚಿಸುವುದು, ಶಾಂತರೀತಿಯಲ್ಲಿ ಮತಾಂತರಗೊಳಿಸುವಿಕೆಯೇ ಮೊದಲಾದ ಕಾರ್ಯಕ್ರಮಗಳು ಮಹಾವೀರನಿಂದಾಗಿದ್ದುವು. ಈ ಶತಮಾನಗಳ ವಿಶೇಷ ಗುಣಗಳೆಂದರೆ—ಪಶುಬಲಿಯು ಮೆಲ್ಲನೆ ಮಾಯವಾಗುವಿಕೆ, ಜೈನಧರ್ಮವು ಅರಸರುಗಳಿಂದ ಪ್ರೋತ್ಸಾಹಗೊಳ್ಳುವಿಕೆ,

ಚತುರ್ದಿಕ್ಕುಗಳಲ್ಲಿಯೂ ಈ ಧರ್ಮದ ಹರಡುವಿಕೆ, ಅಂಗವೆಂಬ ಗ್ರಂಥಗಳ ಮನನ, ಈ ಏರ್ಪಾಟುಗಳೆಲ್ಲವೂ ಮಹಾವೀರನ ಶಿಷ್ಯರಿಂದ ನಡೆಯುತ್ತಿದ್ದುವು. ಗ್ರೀಕ ಅರಸನಾದ ಅಲೆಗ್ಝಾಂಡರನು ಹಿಂದುಸ್ಥಾನದ ಮೇಲೆ ದಂಡೆತ್ತಿ ಬರುವ ಸಮಯದಲ್ಲೇ ಜೈನಗುರುಗಳು ಸಿಂಧುನದಿಯ ದಡದಲ್ಲಿ ಕಾಣಿಸಿಕೊಂಡರು. ಜೈನಮತಾವಲಂಬಿಯಾದ ಮೌರ್ಯ ವಂಶದ ಚಂದ್ರಗುಪ್ತನ ಸಮಯದಲ್ಲಿ ದಕ್ಷಿಣ ದೇಶಗಳಲ್ಲಿಯೂ ಈ ನಿರ್ಗ್ರಂಥ ಗುರುಗಳು ಕಾಣಿಸುತ್ತಿದ್ದರು. ಕನ್ನಡ ಜಿಲ್ಲೆಗಳಲ್ಲಿ ಹಿಂದೆಯೇ ಜೈನಮತವು ಪ್ರಾಶಸ್ತ್ಯವನ್ನು ಹೊಂದಿಕೊಂಡಿದ್ದುದರಿಂದಲೇ ಭದ್ರಬಾಹುವು ಜೈನಮತ ಪ್ರಚಾರಕಾರ್ಯವನ್ನು ಮಾಡಲು ಧೈರ್ಯದಿಂದ ಮುನ್ನಡೆದನು. ಹೇಗೆಂದರೂ ಕನ್ನಡ ಜಿಲ್ಲೆಗಳಲ್ಲಿ ಅವನ ಪ್ರವಾಸದ ಕಾರ್ಯಕ್ರಮವು ಫಲದಾಯಕವಾಗಿ ಪರಿಣಮಿಸಿ ಜೈನಮತವು ಅಲ್ಲಿ ಬಲವಾಗಿ ಬೇರೂರಿಕೊಂಡಿತು. ನಂದರ ಕಾಲದಲ್ಲಿ ಜೈನಮತವು ಕಳಿಂಗದಲ್ಲಿ ಸ್ಥಿರವಾಗಿ ಸಾಧಾರಣ ಕ್ರಿ. ಪೂ. ೨ನೆಯ ಶತಮಾನದಲ್ಲಿ ಖಾರವೇಲನು ಆಳುವ ತನಕ ಅದು ದೇಶದ ಮತವಾಗಿದ್ದಿತು.

ಕ್ರಿಸ್ತಶಕ ಮೊದಲನೆಯ ಶತಮಾನದಲ್ಲಿ ಮಥುರದಲ್ಲಿಯೂ ಇತ್ತ ಶ್ರವಣಬೆಳ್ಗೊಳದಲ್ಲಿಯೂ ಜೈನಮತವು ಪ್ರಚಾರದಿಂದಿತ್ತು. ನಮಗೆ ಆ ಕಾಲದ ಅನೇಕ ಶಾಸನಗಳು ದೊರಕಿವೆ. ಆ ಕಾಲದಲ್ಲಿ ಜೈನಧರ್ಮವನ್ನು ಪ್ರಚಾರಮಾಡಲು ಮಹಾವೀರನ ಶಿಷ್ಯದಳವು ಬಹಳ ಹೆಣಗಾಡಿರುವುದು ಆ ಕಾಲದ ಗಣನೀಯ ಸಂಗತಿಯಾಗಿದೆ. ಜೈನ ಮತ್ತು ಬೌದ್ಧ ಮತಗಳು ಏಕರೀತಿಯಿಂದ ಬೆಳೆದು ಬರುತ್ತ ಇರುವ ಕಾಲದಲ್ಲಿ ಅವುಗಳೊಳಗೆ ಬೆಳೆದು ಬಂದ ಸಂಬಂಧವನ್ನೂ ಪರಿಶೀಲಿಸುವುದು ಅಗತ್ಯ.

## ೩. ಪುರಾತನಮಧ್ಯಚರಿತ್ರೆಯ ಕಾಲ

(4ನೇ ಶತಮಾನದಿಂದ 12ನೇ ಶತಮಾನದ ವರೆಗೆ)

ಉಬ್ಬಿ ಬಂದಂತೆಯೇ ಅಭಿಪ್ರಾಯ ಭೇದಬೀಜಗಳು ಜೈನಮತದಲ್ಲಿ ಕಾಣಲಾರಂಭಿಸಿದುವು. ಮಹಾವೀರನ ನಿರ್ವಾಣದನಂತರ ಅಭಿಪ್ರಾಯ ಭೇದಗಳು ತಲೆದೋರಿದರೂ ಅವು ಜೈನಸಮಾಜದ ಸಂಪೂರ್ಣತೆಯನ್ನು

ಭೇದಿಸಲು ಅಸಮರ್ಥವಾದುವು. ಜೈನಮತದಲ್ಲಿ ದಿಗಂಬರ ಮತ್ತು ಶ್ವೇತಾಂಬರವೆಂಬ ಎರಡು ಪಂಗಡಗಳು ತಲೆದೋರಿದುವು. ಅದೇ ರೀತಿ ಬೌದ್ಧಮತದಲ್ಲಿ ಹೀನಯಾನ ಮತ್ತು ಮಹಾಯಾನ ಎಂಬ ಎರಡು ಪಂಗಡಗಳು ತಲೆದೋರಿದುವು. ಭದ್ರಬಾಹುವಿನ ಕಾಲದಿಂದ ನಡೆಯಲಾರಂಭವಾಗಿ ದಕ್ಷಿಣಪ್ರವಾಸಗೊಂಡವರು ದಿಗಂಬರರಾಗಿಯೂ ಉತ್ತರದಲ್ಲಿದ್ದವರು ಶ್ವೇತಾಂಬರರಾಗಿಯೂ ಮಾರ್ಪಟ್ಟರು.

ಆ ಕಾಲದಲ್ಲಿಯ ವೈಶಿಷ್ಟ್ಯವೆಂದರೆ ಬೇರೆ ಬೇರೆ ಪಂಗಡಗಳ ಬೇರೆ ಬೇರ ಸಾಹಿತ್ಯದ ಬೆಳವಣಿಗೆಯು. ಮಹಾವೀರನು ಸಂಸ್ಕೃತದಲ್ಲಿ ಉಪದೇಶಿಸುವುದರ ಬದಲಾಗಿ, ಸಾಮುದಾಯಿಕ ಮಹಾಜನರ ಭಾಷೆಯಾದ ಪ್ರಾಕೃತದಲ್ಲಿ ಉಪದೇಶಿಸತೊಡಗಿದನು. ಬೌದ್ಧಮತಾವಲಂಬಿಗಳಿಗೆ ಪಾಲಿಯು ಸಾಹಿತ್ಯದ ಭಾಷೆಯಾದಂತೆ ಜೈನರಿಗೆ ಪ್ರಾಕೃತವು ಆಗಿಬಿಟ್ಟಿತು. ದೇವರ ಉಪದೇಶಗಳ ಹನ್ನೆರಡು ಅಂಗಗಳಲ್ಲಿ ಕ್ರಮಾನುಗತದಲ್ಲಿ ಅನುಗೊಳಿಸಿದ್ದರೂ ಅವು ಬಾಯಿಪಾಠವಾಗಿ ಇತ್ತೇ ವಿನಹ ಬರಹದಲ್ಲಿ ಇರಲಿಲ್ಲ. ಅದರ ನಂತರದ ಶತಮಾನಗಳಲ್ಲಿ ಈ ಅಂಗಗಳು ಕ್ರಮೇಣ ಮಾಯವಾಗುತ್ತ ಬಂದುವು.

೫ನೆಯ ಶತಮಾನದಲ್ಲಿ ಉತ್ತರದ ಶ್ವೇತಾಂಬರರು ಕಳೆದುಹೋದ ಅಂಗಗಳನ್ನು ಶೋಧಿಸಲು ಪ್ರಯತ್ನಪಟ್ಟರು. ಕ್ರಿ. ಶ. ೪೫೪ರಲ್ಲಿ ದೇವರ್ಧಿಗಣಿಯ ಪ್ರಭುತ್ವದಲ್ಲಿ ವಲ್ಲಭಿಯಲ್ಲಿ ನಡೆದ ಮಹಾಸಭೆಯಲ್ಲಿ ಹನ್ನೊಂದು ಅಂಗಗಳನ್ನು ಸಂಗ್ರಹಿಸಿದರು. ಆದರೆ ಅವು ಶುದ್ಧವಾದವುಗಳಲ್ಲವೆಂದು ದಿಗಂಬರರು ವಾದಿಸಿದರು. ಶ್ವೇತಾಂಬರರು ಹೊಸದಾಗಿ ಹುಡುಕಿದ ಆ ಅಂಗಗಳ ಪಠನಕ್ಕೆ ಮೊದಲು ಮಾಡಿದರು.

ದಿಗಂಬರರು ಪ್ರಾಕೃತದಲ್ಲಿ ಬರೆದ ಜೈನತತ್ತ್ವದ ಮೂಲಗ್ರಂಥಗಳನ್ನು ಮುಂದಿಟ್ಟರು. ಅವುಗಳ ಮುಖ್ಯಕರ್ತರಾದ ಕುಂದಕುಂದಾಚಾರ್ಯ ಮತ್ತು ಉಮಾಸ್ವಾಮಿಯವರು ಕ್ರಿಸ್ತಪೂರ್ವ ಮೊದಲನೆಯ ಶತಮಾನದಲ್ಲಿ ಕೀರ್ತಿಹೊಂದಿದ್ದರಾಗಿ ತಿಳಿದುಬರುತ್ತವೆ.

ಬೌದ್ಧರೊಂದಿಗೆ ತತ್ತ್ವಚರ್ಚೆಗಾಗಿ ಸ್ಯಾದ್ವಾದಾಚಾರಕ್ರಮವು ಈ ಶತಮಾನದಲ್ಲಿ ಪ್ರಚಾರದಲ್ಲಿದ್ದಿತು. ಬೌದ್ಧರನ್ನು ಧರ್ಮವಾದದಲ್ಲಿ

ಸೋಲಿಸಿದ ಜೈನತರ್ಕಶಾಸ್ತ್ರಜ್ಞರಾದ ಸಮಂತಭದ್ರ ಮತ್ತು ಅಕಲಂಕರು ಈ ಕಾಲದಲ್ಲಿ ವಾಸಿಸಿದ್ದರು. ಧರ್ಮವಾದದಲ್ಲಾದ ಸೋಲೇ ಹಿಂದು ಸ್ಥಾನದಲ್ಲಿ ಬೌದ್ಧರ ಅವನತಿಗೆ ಕಾರಣವಾಯಿತೆಂದು ತಿಳಿಯಬೇಕಾಗಿದೆ.

ಈ ಕಾಲದಲ್ಲಿ ಸಾಹಿತ್ಯಕಾರ್ಯದಲ್ಲಿ ದಿಗಂಬರರು ದಕ್ಷಿಣದಲ್ಲಿಯೂ ಶ್ವೇತಾಂಬರರು ಪಶ್ಚಿಮದಲ್ಲಿಯೂ ಪ್ರವೀಣತೆಯನ್ನು ಹೊಂದಿದರು. ಎರಡೂ ಪಂಗಡದವರು ಪ್ರಾಕೃತದಲ್ಲಿಯೂ ಸಂಸ್ಕೃತದಲ್ಲಿಯೂ ಅನೇಕ ಗ್ರಂಥಗಳನ್ನು ರಚಿಸಿರುವರು. ಏಳನೆಯ ಶತಮಾನದಿಂದ ಜೈನರು ಜನಾದರಣೀಯವಾದ ಸಾಹಿತ್ಯವನ್ನುಂಟುಮಾಡಿರುತ್ತಾರೆ.

ದಕ್ಷಿಣದಲ್ಲಿ ಸಮಂತಭದ್ರ, ಜಿನಸೇನ, ಅಕಲಂಕ, ನೇಮಿಚಂದ್ರ ಇವರುಗಳ ಹೆಸರುಗಳೂ, ಉತ್ತರ ಮತ್ತು ಪಶ್ಚಿಮದಲ್ಲಿ ಸಿದ್ಧಸೇನದಿವಾಕರ, ಹರಿಭದ್ರಸೂರಿ, ಧನಪಾಲ, ಹೇಮಚಂದ್ರಾಚಾರ್ಯ ಇವರುಗಳ ಹೆಸರುಗಳೂ ಲೇಖಕರಲ್ಲಿ ಪ್ರಖ್ಯಾತಿ ಹೊಂದಿವೆ. ಜೈನ ಲೇಖಕರಿಂದಲೇ ಅಲ್ಲಲ್ಲಿಯ ಕನ್ನಡ ಮೊದಲಾದ ದೇಶಭಾಷೆಗಳು ಸಾಹಿತ್ಯದ ಆಕಾರಕ್ಕೆ ಆ ಕಾಲದಲ್ಲಿ ಬಂದಿವೆ.

ದೇಶಭಾಷೆಗಳಲ್ಲಿ ಮೊದಲಿನ ಪುಸ್ತಕಗಳು ಜೈನ ಲೇಖಕರಿಂದಲೇ ಬರೆಯಲಾಗಿವೆ. ದಕ್ಷಿಣದಲ್ಲಿ ದಿಗಂಬರರೂ ಉತ್ತರ ಮತ್ತು ಪಶ್ಚಿಮಗಳಲ್ಲಿ ಶ್ವೇತಾಂಬರರೂ ರಾಜಾಶ್ರಯವನ್ನು ಹೊಂದಿರುತ್ತಾರೆ. ಅದು ಜೈನ ಮತಕ್ಕೆ ಅಭ್ಯುದಯದ ಕಾಲವಾಗಿತ್ತು.

## ೪. ಮಧ್ಯಚರಿತ್ರೆಯ ಕಾಲ

(12ನೇ ಶತಮಾನದಿಂದ 16ನೇ ಶತಮಾನದ ವರೆಗೆ)

ಇದು ಅವಸ್ಥಾಂತರ ಮತ್ತು ಅವನತಿಯ ಕಾಲ. ಜೈನ ದೇವಾಲಯದ ಮುಖ್ಯ ಶಕ್ತಿಯಾದ ಗುರುಗಳ ವ್ಯವಸ್ಥಿತ ಪದ್ಧತಿಯು ಶಿಥಿಲವಾಗುತ್ತ ಬಂದು, ಆತ್ಮಸಮರ್ಪಣೆಯ ಭಾವವು ಮಾಯವಾಗುತ್ತ ಬಂದಿತು. ತತ್ತ್ವಸಾರವು ಮೂಲೆಗೊಳ್ಳುತ್ತ ಬಂದು, ಗುರುಗಳು ಅರಿಯದ ಜನರಿಗೆ ತತ್ತ್ವಬೋಧನೆ ಮಾಡಲು ಅಸಮರ್ಥರಾದರು. ಮತ್ಸರಗಳು ಮೊಳೆತು ಪಂಗಡಗಳ ಬೋಧಕರಾಗಿ ತಮ್ಮ ಸ್ವಾರ್ಥಕ್ಕೆ ಹೆಚ್ಚು

ಗಮನ ಕೊಡುವವರಾದುದಲ್ಲದೆ ಸಾರ್ವಜನಿಕಪಾಠವನ್ನು ಮರೆತರು. ಆದುದರಿಂದ ಈ ಕಾಲದಲ್ಲಿ ಮೆಲ್ಲಗೆ ವೈಷ್ಣವ ಮತ್ತು ಶಿವಾರಾಧಕರಾಗಲು ತೊಡಗಿ ಆ ಎರಡು ಮತಗಳು ಪ್ರಬಲಗೊಳ್ಳುತ್ತ ಬಂದುವು. ಈ ಸಂಘದ ಬಲಹೀನತೆಯಿಂದ ರಾಜರುಗಳ ಪೋಷಣೆ, ರಾಜಕೀಯ ಮತ್ತು ಸಾಮಾಜಿಕ ಮೇಲ್ಮೆಗಳು ಕಡೆಗೊಂಡುವು.

ಜೈನರು ಆ ಕಾಲದಲ್ಲಿ ಬಹಳ ಐಶ್ವರ್ಯವಂತರಾಗಿದ್ದರೆಂಬ ಸಂಗತಿಯನ್ನು ಆಲೋಚಿಸುವಾಗ ಈ ಅವನತಿಯು ಆಶ್ಚರ್ಯಕರವೆಂಬುದಾಗಿ ತಿಳಿದುಬರುತ್ತದೆ. ಈ ಕಾಲದ ಮೊದಲ ಭಾಗದಲ್ಲಿ ಇಂಡಿಯ ದೇಶದ ಪುಣ್ಯಸ್ಥಳಗಳಲ್ಲಿ ಅನೇಕ ಅಂದವಾದ ಜೈನದೇವಸ್ಥಾನಗಳು ಹೆಚ್ಚುಹೆಚ್ಚಾಗಿ ಉಂಬಳಿಗಳನ್ನು ಪಡೆದು ಕಟ್ಟಲ್ಪಟ್ಟಿದ್ದುವು. ಆದರೆ ಮಹಮ್ಮದೀಯರ ಉಪಟಳದಿಂದ ದೇವಸ್ಥಾನ ಕಟ್ಟುವ ಕೆಲಸವೂ ನಿಲ್ಲಲಾರಂಭವಾಯಿತು. ಆ ಸಮಯದಲ್ಲಿ ಮಹಮ್ಮದೀಯರು, ದೇವಸ್ಥಾನಗಳನ್ನು ಕೆಡಹಿ ಅವುಗಳಿಂದ ಮಸೀದಿಗಳನ್ನು ಕಟ್ಟಿಸುತ್ತಿದ್ದರು. ಬಹುಜನರ ಮತಾಭಿಮಾನವು ಏಕರೀತಿಯಲ್ಲಿದ್ದಿತಾದರೂ ಈ ಸಂಘದ ಐಕ್ಯ ಮತ್ತು ಸಹನಶಕ್ತಿಯು ಒಡೆದುಹೋಯಿತು.

## ೫. ಆಧುನಿಕಚರಿತ್ರೆ

**(16ನೇ ಶತಮಾನದಿಂದ—)**

ಒಳಗಿನ ಒಡಕಿನಿಂದ ಜೈನಸಮಾಜವು ಬಲಗುಂದುತ್ತ ಬರಲಾರಂಭಿಸಿತು. ಅನೇಕ ಒಳಪಂಗಡಗಳಾಗಿ ಮತಪ್ರಚಾರಕ್ಕೆ ಯಾವ ಪ್ರಕಾರದಲ್ಲಿಯೂ ಉಪಯೋಗವಾಗಲಿಲ್ಲ. ಇವರ ಪೂಜಾಕ್ರಮಗಳಲ್ಲಿ ಮಾತ್ರ ಕೆಲವು ಭೇದಗಳು ಇದ್ದರೂ ಇವರು ಭ್ರಾತೃಗಳಂತಿರುವ ಬದಲಾಗಿ ದ್ವೇಷಿಗಳಾಗಿ ವರ್ತಿಸುತ್ತಿದ್ದರು. ಇತರ ಸಮಾಜಗಳೊಂದಿಗೆ ಸಂಪರ್ಕ ನಿಷೇಧದ ಹಿಂದುಗಳ ಧೋರಣೆಗೆ ವಿರೋಧವಿದ್ದ ಜೈನರು ಅವರಿಗಿಂತಲೂ ಒಂದು ಹೆಜ್ಜೆ ಮುಂದೆ ಸಾಗಿದರು. ಹೊರಗಿನಿಂದ ಬರುವ ಜೈನರ ಸಂಖ್ಯೆಯು ಕುಂದಿ ಬರುತ್ತ ಜೈನಮತಾವಲಂಬಿಗಳ ಸಂಖ್ಯೆಯು ಕ್ಷೀಣವಾಗತೊಡಗಿತು. ಅಕ್ಬರನ ರಾಜ್ಯದಾಡಳಿತೆಯ ಸಮಯ ಜೈನರಿಗೆ

090664



ಹೆಚ್ಚಿನ ರಿಯಾಯತಿಗಳು ಕೆಲವು ಗುರುಗಳಿಂದ .ದೊರೆತುವಲ್ಲದೆ ಅವರ ಜಾತಿಸಂಖ್ಯೆಯ ಬಲದಿಂದಲ್ಲ.

ಹಿಂದೀ ಭಾಷೆಯು ಹೆಚ್ಚು ಹೆಚ್ಚಾಗಿ ಪ್ರಾಮುಖ್ಯತೆಯನ್ನು ಹೊಂದುತ್ತ ಸಂಸ್ಕೃತದಲ್ಲಿ ಮತ್ತು ಪ್ರಾಕೃತದಲ್ಲಿ ಬರೆಯಲಾಗುವ ಗ್ರಂಥಗಳು ಕಾಣದಾದುವು. ಪ್ರಾಕೃತ ಮತ್ತು ಸಂಸ್ಕೃತಗಳಲ್ಲಿಯ ಯಾವತ್ತು ಗ್ರಂಥಗಳು ಹಿಂದೀಭಾಷೆಯಲ್ಲಿ ಭಾಷಾಂತರ ಹೊಂದಲು, ಆ ಭಾಷೆಯು ಧಾರ್ಮಿಕ ಗ್ರಂಥಗಳ ಪ್ರಕಟನೆಗಳಲ್ಲಿ ಪ್ರಸಿದ್ಧಿ ಹೊಂದಲಾರಂಭಿಸಿತು. ಮೊದಲು ಶಾಸ್ತ್ರಭಂಡಾರಗಳನ್ನು ಮಹಮ್ಮದೀಯರ ದಾಳಿಯಿಂದ ರಕ್ಷಿಸಲು ಜಾಗರೂಕತೆಯಿಂದಿಡಬೇಕಿತ್ತು. ಆದರೆ ಆ ಹೆದರಿಕೆಯು ಅಳಿದುಹೋದರೂ ಪವಿತ್ರ ಗ್ರಂಥಗಳನ್ನು ಜಾಗರೂಕತೆಯಿಂದ ಕಾಯುವ ಅಭ್ಯಾಸವು ಅದರ ಅಧ್ಯಯನದ ಬದಲಾಗಿ ಅದರ ಪೂಜೆಯನ್ನು ಮಾಡುವಂತಾಯಿತು.

ಪಾಶ್ಚಾತ್ಯರು ಪೌರ್ವಾತ್ಯರನ್ನೂ ಜೈನರನ್ನೂ ಎಚ್ಚರಗೊಳಿಸಿದ್ದಾರೆ. ಆದರೆ ಅವರ ಕಾಲದ ಆವಶ್ಯಕತೆಗಳನ್ನು ಇನ್ನೂ ತಿಳಿಯಲಿಲ್ಲ. ಅವರು ಬೇಗನೆ ಸರಿದಾರಿಗೆ ಬಂದು ದೊಡ್ಡ ಸಾಮಾಜಿಕ ಬದಲಾವಣೆಗೆ ಪ್ರಯತ್ನಿಸುವ ಸಮಯವು ಬಹಳ ದೂರವಿರಲಿಕ್ಕಿಲ್ಲ.

ಇಡಿಯ ಭೂಲೋಕದಲ್ಲಿ ಅಹಿಂಸಾತತ್ತ್ವವು ಪ್ರಸಿದ್ಧಿಹೊಂದಿರುವುದರಿಂದ "ನಾವು ಅದನ್ನು ಶೋಧಿಸಿದವರು" ಎಂದು ಜಗತ್ತಿಗೆ ಜೈನರು ಸಾರುವುದು ಅವರ ಗೌರವಕ್ಕೆ ಸಲ್ಲುವ ಕರ್ತವ್ಯ. ಜೈನಧರ್ಮದ ಚರಿತ್ರೆಯನ್ನು ಕೂಲಂಕಷವಾಗಿ ಮುಂದಿಡುವುದು ಅಗತ್ಯ. ಈ ಮಹಾಮತದ ಉನ್ನತಿಯ ಮತ್ತು ಅವನತಿಯ ವಿಷಯದ ಕತೆಯು ಬೋಧಪರವೂ ಆನಂದದಾಯಕವೂ ಆಗಿರುವುದು. ಈ ವಿಷಯವಾಗಿ ಲೇಖನಗಳನ್ನು ಬರೆಯುವ ಚತುರರನ್ನು ಕೂಡಿಸಿ, ಅವರಿಂದ ಈ ಧರ್ಮದ ಪ್ರತಿಯೊಂದು ಭಾಗವನ್ನು ಬರೆಯಿಸಿ ಅನಂತರ ಅದನ್ನು ಒಂದುಗೂಡಿಸಬೇಕು.

---